CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೦ | ಬೆಂಗಳೂರು, ಗುರುವಾರ, ಏಪ್ರಿಲ್ ೭, ೨೦೦೫ (ಚೈತ್ರ ೧೭, ಶಕ ವರ್ಷ ೧೯೨೭) | ಸಂಚಿಕೆ ೧೪

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಶಿಕ್ಷಣ ಸಚಿವಾಲಯ**

**ಅಧಿಕೃತ ಜ್ಞಾಪನಾ ಸಂಖ್ಯೆ: ಇಡಿ 83 ಡಿಜಿಓ 2000 (iv), ಬೆಂಗಳೂರು, ದಿನಾಂಕ: 7ನೇ ಜನವರಿ 2005**

**ವಿಷಯ:** ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯ ಹಿರಿಯ ಉಪ ನಿರ್ದೇಶಕ ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾಪಟ್ಟಿ ಪ್ರಕಟಣೆ.

**ಉಲ್ಲೇಖ:** ದಿನಾಂಕ: 17.11.2000 ರ ಅಧಿಸೂಚನೆ ಸಂಖ್ಯೆ: ಇಡಿ 83 ಡಿಜಿಓ 2000.

ದಿನಾಂಕ:17.11.2000ರ ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 83 ಡಿಜಿಓ 2000 ದಲ್ಲಿ 31.10.2000 ರಲ್ಲಿದ್ದಂತೆ ಮುದ್ರಣ, ಲೇಖನಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯ ಗೆಜೆಟೆಡ್ ಶ್ರೇಣಿಯ ವಿವಿಧ ವೃಂದದ ಅಧಿಕಾರಿಗಳ ಕರಡು ಜೇಷ್ಠತಾಪಟ್ಟಿಯನ್ನು ಆಕ್ಷೇಪಣೆ ಏನಾದರೂ ಇದ್ದಲ್ಲಿ, ಅದನ್ನು ಲಿಖಿತ ಮೂಲಕ ಸಲ್ಲಿಸುವಂತೆ ಪ್ರಕಟಿಸಲಾಗಿತ್ತು. ಹಿರಿಯ ಉಪನಿರ್ದೇಶಕ ವೃಂದಕ್ಕೆ ಸಂಬಂಧಿಸಿದಂತೆ ಶ್ರೀ ಎನ್. ಹನುಮಯ್ಯ ಹಾಗೂ ಶ್ರೀ ಎಂ. ರವಿಶಂಕರ್ ಅವರುಗಳು 1956 ರಿಂದ ಸಹಾಯಕ ನಿರ್ದೇಶಕರ ಹುದ್ದೆಗಳ ವರ್ಗೀಕರಣ ಮಾಡಿರುವುದು ಸರಿಯಾಗಿಲ್ಲ, ಶ್ರೀ ಕೃಷ್ಣೋಜಿರಾವ್ ಹಾಗೂ ಶ್ರೀ ರೇಣುಕಾಚಾರ್ಯ ಅವರಿಗೆ ಬಡ್ತಿ ನೀಡಿದ ದಿನಾಂಕದಿಂದ ತಮಗೂ ಬಡ್ತಿ ನೀಡಬೇಕೆಂದು ವಿನಂತಿಸಿರುವರು.

ಸರ್ಕಾರವು ಈ ಹಿಂದೆ ದಿನಾಂಕ:27.5.1997 ರಂದು ಪ್ರಕಟಪಡಿಸಿದ ತಾಂತ್ರಿಕ ಸಹಾಯಕ ನಿರ್ದೇಶಕರ ಅಂತಿಮ ಜೇಷ್ಠತಾಪಟ್ಟಿಯಲ್ಲಿ ಶ್ರೀ ಕೃಷ್ಣೋಜಿರಾವ್ ಹಾಗೂ ಶ್ರೀ ರೇಣುಕಾಚಾರ್ಯ ಅವರ ಹೆಸರು ಶ್ರೀ ಎನ್. ಹನುಮಯ್ಯ ಹಾಗೂ ಶ್ರೀ ಎಂ. ರವಿಶಂಕರ್ ಅವರ ಮೇಲಿರುತ್ತದೆ. ಆದುದರಿಂದ ಶ್ರೀ ಕೃಷ್ಣೋಜಿರಾವ್ ಮತ್ತು ಶ್ರೀ ರೇಣುಕಾಚಾರ್ಯ ಅವರಿಗೆ ಬಡ್ತಿ ನೀಡಿದ ದಿನಾಂಕದಿಂದ ತಮಗೂ ಬಡ್ತಿ ನೀಡುವಂತೆ ಕೋರಿರುವ ಇವರ ವಾದದಲ್ಲಿ ಯಾವುದೇ ಹುರುಳಿರುವುದಿಲ್ಲ. ಆದುದರಿಂದ ಈ ಆಕ್ಷೇಪಣೆಯನ್ನು ತಳ್ಳಿಹಾಕಿದೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯ ಹಿರಿಯ ಉಪನಿರ್ದೇಶಕರ ವೃಂದದ ದಿನಾಂಕ:31.10.2000 ರಲ್ಲಿ ಇದ್ದಂತಹ ಅಧಿಕಾರಿಗಳ ಜೇಷ್ಠತಾಪಟ್ಟಿಯನ್ನು ಈ ಕೆಳಗಿನಂತೆ ಪ್ರಕಟಿಸಿದೆ.

| ಕ್ರ. ಸಂ. | ಹೆಸರು ಶ್ರೀಮತಿ:ಶ್ರೀ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಮುಂಬಡ್ತಿ ಹೊಂದಿದ ದಿನಾಂಕ |
|---|---|---|---|---|
| 1. | ಎನ್. ಹನುಮಯ್ಯ | 21.08.1949 | 04.05.1983 | 24.01.2000 |
| 2. | ಎಂ. ರವಿಶಂಕರ್ | 11.07.1958 | 10.03.1983 | 24.01.2000 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 48

**ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು 1,2)

**ಅಧಿಕೃತ ಜ್ಞಾಪನಾ ಸಂಖ್ಯೆ: ಇಡಿ 83 ಡಿಜಿಓ 2000 (v), ಬೆಂಗಳೂರು, ದಿನಾಂಕ: 7ನೇ ಜನವರಿ 2005**

**ವಿಷಯ:** ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯ ಸಹ ನಿರ್ದೇಶಕ ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾಪಟ್ಟಿ ಪ್ರಕಟಣೆ.

**ಉಲ್ಲೇಖ:** ದಿನಾಂಕ: 17.11.2000 ರ ಅಧಿಸೂಚನೆ ಸಂಖ್ಯೆ: ಇಡಿ 83 ಡಿಜಿಓ 2000.

ದಿನಾಂಕ:17.11.2000ರ ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 83 ಡಿಜಿಓ 2000 ದಲ್ಲಿ 31.10.2000 ರಲ್ಲಿದ್ದಂತೆ ಮುದ್ರಣ, ಲೇಖನಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯ ಗೆಜೆಟೆಡ್ ಶ್ರೇಣಿಯ ವಿವಿಧ ವೃಂದದ ಅಧಿಕಾರಿಗಳ ಕರಡು ಜೇಷ್ಠತಾಪಟ್ಟಿಯನ್ನು ಆಕ್ಷೇಪಣೆ

ಏನಾದರೂ ಇದ್ದಲ್ಲಿ, ಅದನ್ನು ಲಿಖಿತ ಮೂಲಕ ಸಲ್ಲಿಸುವಂತೆ ಪ್ರಕಟಿಸಲಾಗಿತ್ತು. ಸಹನಿರ್ದೇಶಕ ವೃಂದಕ್ಕೆ ಸಂಬಂಧಿಸಿದಂತೆ ಶ್ರೀ ಎನ್. ಹನುಮಯ್ಯ ಹಾಗೂ ಶ್ರೀ ಎಂ. ರವಿಶಂಕರ್ ಅವರುಗಳು 1956 ರಿಂದ ಸಹಾಯಕ ನಿರ್ದೇಶಕರ ಹುದ್ದೆಗಳ ವರ್ಗೀಕರಣ ಮಾಡಿರುವುದು ಸರಿಯಾಗಿಲ್ಲ, ಶ್ರೀ ಕೃಷ್ಣೋಜಿರಾವ್ ಹಾಗೂ ಶ್ರೀ ರೇಣುಕಾಚಾರ್ಯ ಅವರಿಗೆ ಬಡ್ತಿ ನೀಡಿದ ದಿನಾಂಕದಿಂದ ತಮಗೂ ಬಡ್ತಿ ನೀಡಬೇಕೆಂದು ವಿನಂತಿಸಿರುವರು.

ಸರ್ಕಾರವು ಈ ಹಿಂದೆ ದಿನಾಂಕ:27.5.1997 ರಂದು ಪ್ರಕಟಪಡಿಸಿದ ತಾಂತ್ರಿಕ ಸಹಾಯಕ ನಿರ್ದೇಶಕರ ಅಂತಿಮ ಜೇಷ್ಠತಾಪಟ್ಟಿಯಲ್ಲಿ ಶ್ರೀ ಕೃಷ್ಣೋಜಿರಾವ್ ಹಾಗೂ ಶ್ರೀ ರೇಣುಕಾಚಾರ್ಯ ಅವರ ಹೆಸರು ಶ್ರೀ ಎನ್. ಹನುಮಯ್ಯ ಹಾಗೂ ಶ್ರೀ ಎಂ. ರವಿಶಂಕರ್ ಅವರ ಮೇಲಿರುತ್ತದೆ. ಆದುದರಿಂದ ಶ್ರೀ ಕೃಷ್ಣೋಜಿರಾವ್ ಮತ್ತು ಶ್ರೀ ರೇಣುಕಾಚಾರ್ಯ ಅವರಿಗೆ ಬಡ್ತಿ ನೀಡಿದ ದಿನಾಂಕದಿಂದ ತಮಗೂ ಬಡ್ತಿ ನೀಡುವಂತೆ ಕೋರಿರುವ ಇವರ ವಾದದಲ್ಲಿ ಯಾವುದೇ ಹುರುಳಿರುವುದಿಲ್ಲ. ಆದುದರಿಂದ ಈ ಆಕ್ಷೇಪಣೆಯನ್ನು ತಳ್ಳಿಹಾಕಿದೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯ ಸಹನಿರ್ದೇಶಕರ ವೃಂದದ ದಿನಾಂಕ:31.10.2000 ರಲ್ಲಿ ಇದ್ದಂತಹ ಅಧಿಕಾರಿಗಳ ಜೇಷ್ಠತಾಪಟ್ಟಿಯನ್ನು ಈ ಕೆಳಗಿನಂತೆ ಪ್ರಕಟಿಸಿದೆ.

| ಕ್ರ. ಸಂ. | ಹೆಸರು ಶ್ರೀಮತಿ:ಶ್ರೀ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಮುಂಬಡ್ತಿ ಹೊಂದಿದ ದಿನಾಂಕ |
|---|---|---|---|---|
| 1. | ಡಿ. ರೇಣುಕಾಚಾರ್ಯ | 25.09.1943 | 07.01.1964 | 09.06.1997 |
| 2. | ಕೃಷ್ಣೋಜಿರಾವ್ | 07.09.1943 | 17.08.1964 | 09.06.1997 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 49

**ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು 1,2)

## ಕಾನೂನು ಸಚಿವಾಲಯ

**ವಿಷಯ:** 2 ಮತ್ತು 3ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಕೋಲಾರ ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಲಾ 108 ಎಲ್‌ಸಿಇ 2003, ದಿನಾಂಕ:23.12.2003.
2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಓಬಿ-2-367 (13)2004, ದಿನಾಂಕ: 5.11.2004.

**ಪ್ರಸ್ತಾವನೆ:**

2 ಮತ್ತು 3ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಕೋಲಾರ, ನ್ಯಾಯಾಲಯವನ್ನು ಸೃಜಿಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಸದರಿ ನ್ಯಾಯಾಲಯದ ಕಾರ್ಯಾವಧಿಯು ದಿನಾಂಕ: 22.12.2004ಕ್ಕೆ ಪೂರ್ಣಗೊಳ್ಳಲಿದೆ.

ಸದರಿ ನ್ಯಾಯಾಲಯವನ್ನು ದಿನಾಂಕ: 23.12.2004 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 117 ಎಲ್‌ಎಸಿ 2004, ಬೆಂಗಳೂರು, ದಿನಾಂಕ: 27ನೇ ನವೆಂಬರ್ 2004**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ 2 ಮತ್ತು 3ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಕೋಲಾರ ನ್ಯಾಯಾಲಯದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 23.12.2004 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 50

**ಎ.ಪಿ. ರಾಮಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಕಾನೂನು ಇಲಾಖೆ (ಆಡಳಿತ-1).

**ವಿಷಯ:** ದಾವಣಗೆರೆ ಮತ್ತು ಗದಗದಲ್ಲಿರುವ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಲಾ 201 ಎಲ್‌ಎಸಿ 2002, ದಿನಾಂಕ:11.11.2002.
2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಓಬಿ-2-367(1)2004, ದಿನಾಂಕ: 30.10.2004 ಮತ್ತು
3. ಪತ್ರ ಸಂಖ್ಯೆ : ಜಿಓಬಿ-2/367(2)2004 ದಿನಾಂಕ:28.10.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಹೊಸದಾಗಿ ಸ್ಥಾಪನೆಯಾದ ದಾವಣಗೆರೆ ಮತ್ತು ಗದಗಗಳಲ್ಲಿನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಗಳ ಕಾರ್ಯಾವಧಿಯನ್ನು ದಿನಾಂಕ:1.12.2004 ರವರೆಗೆ ಮುಂದುವರೆಸಲಾಗಿದೆ.

ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರು ಮೇಲೆ ಓದಲಾದ (2) ಮತ್ತು (3)ರ ಪತ್ರದಲ್ಲಿ ಕ್ರಮವಾಗಿ ದಾವಣಗೆರೆ ಮತ್ತು ಗದಗದಲ್ಲಿನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ:1.12.2004ಕ್ಕೆ ಪೂರ್ಣಗೊಳ್ಳಲಿದ್ದು, ಈ ನ್ಯಾಯಾಲಯಗಳನ್ನು ಹೊಸದಾಗಿ ಸ್ಥಾಪನೆಯಾದ ಜಿಲ್ಲೆಗಳಾದ ದಾವಣಗೆರೆ ಮತ್ತು ಗದಗಗಳಿಗೆ ಸೃಜಿಸಲಾಗಿದ್ದು, ಇವುಗಳನ್ನು ದಿನಾಂಕ:2.12.2004 ರಿಂದ ಖಾಯಂಗೊಳಿಸುವುದು ಅತ್ಯಾವಶ್ಯಕವಾಗಿದೆಯೆಂದು ತಿಳಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 116 ಎಲ್‌ಎಸಿ 2004, ಬೆಂಗಳೂರು, ದಿನಾಂಕ: 26ನೇ ನವೆಂಬರ್ 2004**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 2.12.2004 ರಿಂದ ಎರಡು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಿದೆ.

1) ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ದಾವಣಗೆರೆ

2) ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಗದಗ,

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 51

**ಎ.ಪಿ. ರಾಮಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಕಾನೂನು ಇಲಾಖೆ (ಆಡಳಿತ-1).

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

### ಸುತ್ತೋಲೆ ಸಂಖ್ಯೆ: ಆನಾಸ 131 ಸಲಫ 2004, ಬೆಂಗಳೂರು, ದಿನಾಂಕ: 3ನೇ ಡಿಸೆಂಬರ್ 2004

**ವಿಷಯ:** ವಿವಿಧ ಇಲಾಖೆಗಳಲ್ಲಿ ಗ್ರಾಹಕರ ಪರ ಚಟುವಟಿಕೆಗಳನ್ನು ನಡೆಸುವ ಬಗ್ಗೆ.

ದಿನಾಂಕ: 23.2.2004ರಂದು ನಡೆದ ಗ್ರಾಹಕ ರಕ್ಷಣಾ ಪರಿಷತ್ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದಂತೆ ಗ್ರಾಹಕ ಜಾಗೃತಿ ಕಾರ್ಯಕ್ರಮಗಳನ್ನು ಸಭೆ ಮತ್ತು ವೇದಿಕೆಗಳಲ್ಲಿ ಹಮ್ಮಿಕೊಂಡಾಗ ವಿವಿಧ ಇಲಾಖೆಯಿಂದ ಸರ್ಕಾರದ ಯೋಜನೆಗಳ ವಿವರಗಳನ್ನು ತಿಳಿಸಲು ಇಲಾಖೆ ಪರಿಣಿತರು, ಕಾನೂನು ತಜ್ಞರು, ವ್ಯಾಪಾರ ತಜ್ಞರು ಹಾಗೂ ವಿವಿಧ ಕ್ಷೇತ್ರಗಳಲ್ಲಿ ಗ್ರಾಹಕ ಚಟುವಟಿಕೆ ಕುರಿತ ಅನುಭವ ಹೊಂದಿರುವ ವ್ಯಕ್ತಿಗಳು ಈ ಜಾಗೃತಿ ಸಮಾವೇಶಗಳಲ್ಲಿ ಭಾಗವಹಿಸಲು ಕ್ರಮ ಕೈಗೊಳ್ಳುವುದು. ಈ ರೀತಿ ಸಭೆ, ಸಮ್ಮೇಳನ ಸಮಾರಂಭಗಳನ್ನು ನಡೆಸಲು ಎಲ್ಲಾ ಜಿಲ್ಲಾಧಿಕಾರಿಗಳು, ತಹಶೀಲ್ದಾರರು, ಜಿಲ್ಲಾ ಪಂಚಾಯಿತಿ ಹಾಗೂ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು ಕನಿಷ್ಠ ಪಕ್ಷ ವರ್ಷಕ್ಕೆ ಒಂದು ಸಭೆಯನ್ನು ನಡೆಸಲು ತಿಳಿಸಲಾಗಿದೆ.

ಗ್ರಾಹಕ ಪರ ಚಟುವಟಿಕೆಗಳನ್ನು ನಡೆಸುವ ನಿಟ್ಟಿನಲ್ಲಿ ಎಲ್ಲಾ ಇಲಾಖಾ ಮುಖ್ಯಸ್ಥರು ತಮ್ಮ ತಮ್ಮ ವ್ಯಾಪ್ತಿಯಲ್ಲಿ ಬರುವ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಇಲಾಖಾ ಕಾರ್ಯಕ್ರಮಗಳ ಪಟ್ಟಿ, ಕಾರ್ಯ ವಿಧಾನ ಕೈಪಿಡಿ, ನಾಗರೀಕ ಸನ್ನದು ಪ್ರಕಟಿಸಿ ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಜನ ಸಾಮಾನ್ಯರಿಗೆ ಹಂಚುವ ಬಗ್ಗೆ ಕ್ರಮ ಕೈಗೊಳ್ಳಲು ಕೋರಲಾಗಿದೆ.

ಗ್ರಾಹಕರ ಪರ ಚಟುವಟಿಕೆಗಳನ್ನು ಅನುಷ್ಠಾನಗೊಳಿಸುವಲ್ಲಿ ಎಲ್ಲಾ ಅಧಿಕಾರಿ/ನೌಕರರು ಸಹಕರಿಸಿ, ಕಾರ್ಯಕ್ರಮವನ್ನು ಯಶಸ್ವಿಗೊಳಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ಎಂ.ಕೆ. ಬಲದೇವಕೃಷ್ಣ**

ಪಿ.ಆರ್. 52

ಸರ್ಕಾರದ ಅಪರ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** ಮಹಾಲೇಖಪಾಲರ ಕಛೇರಿಗೆ ಪಿಂಚಣಿ ಪ್ರಾಧಿಕರಣದ ನಮೂನೆಗಳನ್ನು ಮುದ್ರಿಸಲು ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರ ಅರೆಸರ್ಕಾರಿ ಪತ್ರ ಸಂಖ್ಯೆ: ಇಎಸ್ IV/ಫಾರಂ/2004-05/110, ದಿ: 27.9.04.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮಹಾಲೇಖಪಾಲರು ಕರ್ನಾಟಕ, ಬೆಂಗಳೂರು ರವರು ಪ್ರಸ್ತಾವನೆ ಸಲ್ಲಿಸಿ 2004-05ನೇ ಸಾಲಿಗೆ ರಾಜ್ಯ ಸರ್ಕಾರದ ಪಿಂಚಣಿ ಪ್ರಾಧಿಕರಣ ನಮೂನೆಗಳನ್ನು ಪೂರ್ವಭಾವಿಯಾಗಿ ಮುದ್ರಿಸಿ ಬಳಸಲು ರೂ. 4.75 ಲಕ್ಷ ಮೊತ್ತವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಈ ಕೋರಿಕೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

### ಸರ್ಕಾರದ ಆದೇಶ ಸಂಖ್ಯೆ: ಇಡಿ 166 ಪಿಎಂಎ 2004, ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2004

ರಾಜ್ಯ ಸರ್ಕಾರದ ಪಿಂಚಣಿ ಪ್ರಾಧಿಕಾರಣ ನಮೂನೆಗಳನ್ನು ಮುದ್ರಿಸಿ ಬಳಸಲು 2004-05ನೇ ಸಾಲಿಗೆ ರೂ. 4.75 ಲಕ್ಷ (ರೂ. ನಾಲ್ಕು ಲಕ್ಷ ಎಪ್ಪತ್ತೈದು ಸಾವಿರ ಮಾತ್ರ)ಗಳನ್ನು ಮಹಾಲೇಖಪಾಲರು ಕರ್ನಾಟಕ ಬೆಂಗಳೂರು ಇವರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 20058-00-104-00 (ಯೋಜನೇತರ) ಉಪ ಶೀರ್ಷಿಕೆ 051 ಸಾಮಾನ್ಯ ವೆಚ್ಚಗಳ ಅಡಿಯಲ್ಲಿ ಭರಿಸತಕ್ಕದ್ದು. ಈ ಆದೇಶವನ್ನು ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿ: 10.07.1996 ರಲ್ಲಿನ ಅಧಿಕಾರ ಪ್ರತ್ಯಾಯೋಜನೆಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 53

**ಬಿ.ಹೆಚ್. ಪಡಸಲಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ತಾಲ್ಲೂಕು, ಈ ಸಂಸ್ಥೆಗೆ ನೇಮಕ ಮಾಡಿರುವ ಆಡಳಿತಾಧಿಕಾರಿಯವರ ಅವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ:ಕಂ.ಇ. 37 ಇ.ಎಸ್.ಎಫ್. 94, ದಿನಾಂಕ:17.9.96.
2. ಸರ್ಕಾರದ ಆದೇಶ ಸಂಖ್ಯೆ:ಕಂ.ಇ. 42 ಮುನೋಸೊ 2003, ದಿನಾಂಕ:1.3.2004.
3. ಉಪ ವಿಭಾಗಾಧಿಕಾರಿ, ತುಮಕೂರು ಉಪ ವಿಭಾಗ ರವರ ಪತ್ರ ಸಂಖ್ಯೆ:ಎಸಿ.ಪಿಎ.ಸಿ.ಅ.:31/96-97, ದಿನಾಂಕ: 21.10.04

**ಪ್ರಸ್ತಾವನೆ:**

ಮೇಲೆ ಓದಲಾದ-(1)ರ ಸರ್ಕಾರಿ ಆದೇಶದಲ್ಲಿ ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ತಾಲ್ಲೂಕು, ಈ ಸಂಸ್ಥೆಗೆ ಸಾರ್ವಜನಿಕ ಹಿತದೃಷ್ಟಿಯಿಂದ ಉಪ ವಿಭಾಗಾಧಿಕಾರಿಗಳು, ತುಮಕೂರು ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ನಂತರ ಕಾಲ ಕಾಲಕ್ಕೆ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಿಕೊಂಡು ಬರಲಾಗುತ್ತಿದ್ದು, ಮೇಲೆ ಓದಲಾದ-(2)ರ ಸರ್ಕಾರಿ ಆದೇಶದಲ್ಲಿ ವಿಸ್ತರಿಸಲಾಗಿದ್ದ ಆಡಳಿತಾಧಿಕಾರಿ ಅವಧಿಯು ದಿನಾಂಕ:17.3.2004ಕ್ಕೆ ಮುಕ್ತಾಯಗೊಂಡಿರುತ್ತದೆ.

ಮೇಲೆ ಓದಲಾದ-(3)ರ ಪತ್ರದಲ್ಲಿ ಉಪವಿಭಾಗಾಧಿಕಾರಿಗಳು, ತುಮಕೂರು ಹಾಗೂ ಆಡಳಿತಾಧಿಕಾರಿಗಳು ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ತಾಲ್ಲೂಕು, ಇವರು ಸಂಸ್ಥೆಯ ಸದಸ್ಯರಲ್ಲಿ ಭಿನ್ನಾಭಿಪ್ರಾಯಗಳಿದ್ದು, ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯ, ತುಮಕೂರು ಇಲ್ಲಿ ಹೂಡಿರುವ ದಾವೆಯು ಇನ್ನೂ ಇತ್ಯರ್ಥವಾಗದಿರುವುದರಿಂದ ಈ ಸಂದರ್ಭದಲ್ಲಿ ಚುನಾವಣೆ ನಡೆಸುವುದು ಸೂಕ್ತವಲ್ಲವೆಂದು ಅಭಿಪ್ರಾಯಪಟ್ಟಿರುತ್ತಾರೆ. ಹಾಗೂ ಸಂಸ್ಥೆಯ ವಿದ್ಯಾರ್ಥಿಗಳ, ಶಿಕ್ಷಕರ ಹಾಗೂ ಸಾರ್ವಜನಿಕರ ಹಿತದೃಷ್ಟಿಯಿಂದ ಆಡಳಿತಾಧಿಕಾರಿಗಳ ಅವಧಿಯನ್ನು ವಿಸ್ತರಿಸುವಂತೆ ಕೋರಿರುತ್ತಾರೆ. ಆಡಳಿತಾಧಿಕಾರಿಯವರ ವರದಿಯನ್ನು ಪರಿಶೀಲಿಸಿ, ಸರ್ಕಾರವು ಆಡಳಿತಾಧಿಕಾರಿಯವರ ವರದಿಯನ್ನು ಪರಿಶೀಲಿಸಿ, ಸರ್ಕಾರವು ಆಡಳಿತಾಧಿಕಾರಿಯವರ ಅವಧಿಯನ್ನು ದಿನಾಂಕ:18.3.2004 ರಿಂದ 17.9.2004 ಮತ್ತು 18.9.2004 ರಿಂದ ಮತ್ತೆ 6 ತಿಂಗಳ ಅವಧಿಗೆ ವಿಸ್ತರಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಕಂ.ಇ. 42 ಮುನೋಸೊ 2003, ಬೆಂಗಳೂರು, ದಿನಾಂಕ: 18ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ-27-ಎ ಪ್ರಕಾರ ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ತಾಲ್ಲೂಕು, ಈ ಸಂಸ್ಥೆಗೆ ನೇಮಿಸಲಾಗಿದ್ದ ಆಡಳಿತಾಧಿಕಾರಿಯವರ ಅವಧಿಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ:18.3.2004 ರಿಂದ 17.9.2004ರವರೆಗೆ ಮತ್ತು ದಿನಾಂಕ:18.9.2004 ರಿಂದ ಮತ್ತೆ 6 ತಿಂಗಳ ಅವಧಿಗೆ ಅಥವಾ ಸಂಘಕ್ಕೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಈ ವಿಸ್ತರಿಸಿದ ಅವಧಿಯೊಳಗೆ ಸಂಘಕ್ಕೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 54 **ಎಂ.ಪಿ. ಮಂಜುನಾಥ್**

ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

**ಕಾನೂನು ಸಚಿವಾಲಯ**

**ವಿಷಯ:** ಪೈಲೆಟ್ ಪ್ರಾಜೆಕ್ಟ್ ಯೋಜನೆಯಡಿ ಸೃಜಿಸಲಾದ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ದಾವಣಗೆರೆ ನ್ಯಾಯಾಲಯದ ಕಾರ್ಯಾವಧಿಯನ್ನು ಖಾಯಂಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಲಾ 105 ಎಲ್‌ಎಸಿ 2003, ದಿನಾಂಕ: 7.6.2003.
2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ:ಜೆಒಬಿ-2-152:2000 ದಿನಾಂಕ: 16.8.2004.

**ಪ್ರಸ್ತಾವನೆ:**

ಪೈಲೆಟ್ ಪ್ರಾಜೆಕ್ಟ್ ಯೋಜನೆಯಡಿ ಸೃಜಿಸಲಾದ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ದಾವಣಗೆರೆ ನ್ಯಾಯಾಲಯದ ಕಾರ್ಯಾವಧಿಯನ್ನು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ದಿನಾಂಕ:30.6.2004 ರವರೆಗೆ ಮುಂದುವರೆಸಲಾಗಿದೆ.

ಸದರಿ ನ್ಯಾಯಾಲಯವನ್ನು ದಿನಾಂಕ:1.7.2004 ರಿಂದ ಖಾಯಂಗೊಳಿಸುವಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಿದ್ದಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಇನ್ನು ಒಂದು ವರ್ಷದ ಅವಧಿಗೆ ಮುಂದುವರೆಸಲು ತೀರ್ಮಾನಿಸಲಾಯಿತು.

**ಸರ್ಕಾರಿ ಆದೇಶ ಸಂಖ್ಯೆ: ಲಾ 189 ಎಲ್‌ಎಸಿ 2003, ಬೆಂಗಳೂರು, ದಿನಾಂಕ: 29ನೇ ನವೆಂಬರ್ 2004**

ಪೈಲೆಟ್ ಪ್ರಾಜೆಕ್ಟ್ ಯೋಜನೆಯಡಿ ಸೃಜಿಸಲಾದ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ದಾವಣಗೆರೆ ನ್ಯಾಯಾಲಯದ ಕಾರ್ಯಾವಧಿಯನ್ನು ದಿನಾಂಕ: 1.7.2004 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಿದೆ.

ಈ ನ್ಯಾಯಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 949 ವೆಚ್ಚ-7:2004 ದಿನಾಂಕ:28.10.2004 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್. 55 ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-1)

**ವಿಷಯ:** ಗದಗದ 4ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ 2ನೇ ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಲಾ 108 ಎಲ್‌ಸಿಇ 2003, ದಿನಾಂಕ: 23.12.2003.
2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ:ಜೆಒಬಿ-2-267(8)2004 ದಿನಾಂಕ: 8.11.2004.

**ಪ್ರಸ್ತಾವನೆ:**

4ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ 2ನೇ ನ್ಯಾಯಾಲಯ, ಗದಗವನ್ನು ಸೃಜಿಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಸದರಿ ನ್ಯಾಯಾಲಯದ ಕಾರ್ಯಾವಧಿಯ ದಿನಾಂಕ:22.12.2004ಕ್ಕೆ ಪೂರ್ಣಗೊಳ್ಳಲಿದೆ.

ಸದರಿ ನ್ಯಾಯಾಲಯವನ್ನು ದಿನಾಂಕ:23.12.2004 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ಮೇಲೆ ಓದಲಾದ(2)ರ ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 120 ಎಲ್ಎಸಿ 2004, ಬೆಂಗಳೂರು, ದಿನಾಂಕ: 29ನೇ ನವೆಂಬರ್ 2004**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಗದಗ್‌ನ 4ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ 2ನೇ ನ್ಯಾಯಾಲಯದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 23.12.2004 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಿದೆ.

ಈ ನ್ಯಾಯಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ:10.7.2004 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 56 **ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಹೆಚ್.ಎಸ್. ಸೇಠ್, ಹೆಚ್ಚುವರಿ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ವಿರುದ್ಧ ಇಲಾಖಾ ವಿಚಾರಣೆ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ನೋಟೀಸ್ ಸಂಖ್ಯೆ:ಸಿಆಸುಇ 120 ಎಸ್‌ಇಎನ್ 97 ದಿನಾಂಕ: 9.6.1999.
2. ಶ್ರೀ ಹೆಚ್.ಎಸ್. ಸೇಠ್, ರವರ ದಿನಾಂಕ: 1.10.1999ರ ಲಿಖಿತ ಉತ್ತರ.
3. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 120 ಎಸ್‌ಇಎನ್ 97 ದಿನಾಂಕ: 1.8.2002 ಮತ್ತು ತಿದ್ದೋಲೆ ದಿನಾಂಕ:5.8.2002.
4. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 120 ಎಸ್‌ಇಎನ್ 97 ದಿನಾಂಕ: 19.9.2002.
5. ವಿಚಾರಣಾಧಿಕಾರಿಗಳ ವರದಿ ದಿನಾಂಕ: 10.11.2004.

**ಪ್ರಸ್ತಾವನೆ:**

ಶ್ರೀ ಹೆಚ್.ಎಸ್. ಸೇಠ್, ಸರ್ಕಾರದ ಹೆಚ್ಚುವರಿ ಕಾರ್ಯದರ್ಶಿರವರು ಕರ್ನಾಟಕ ಸರ್ಕಾರದ ಸಚಿವಾಲಯ ಆರ್ಥಿಕ ಇಲಾಖೆ (ಅಬಕಾರಿ) ಯಲ್ಲಿ ಉಪಕಾರ್ಯದರ್ಶಿ ಹಾಗೂ ಸಹಕಾರ್ಯದರ್ಶಿಯಾಗಿ 1990 ರಿಂದ 1992ರ ವರೆಗೆ ಕಾರ್ಯನಿರ್ವಹಿಸುತ್ತಿದ್ದಾಗ, ಡಿಸ್ಟಿಲರಿಗಳು ಸಾರಾಯಿ ಬಾಟ್ಲಿಂಗ್ ಗುತ್ತಿಗೆದಾರರಿಗೆ ಸರಬರಾಜು ಮಾಡುವ ಮದ್ಯಸಾರದ ಬೆಲೆಯನ್ನು 1989 ರಿಂದ ಪೂರ್ವಾನ್ವಯವಾಗಿ ಹೆಚ್ಚಿಸಲು ಬಂದ ಪ್ರಸ್ತಾವನೆಯನ್ನು ಸಮರ್ಪಕವಾಗಿ ಪರಿಶೀಲಿಸಿ ಮೇಲಾಧಿಕಾರಿಗಳಿಗೆ ಸೂಕ್ತ ಮಾರ್ಗದರ್ಶನ ನೀಡದೆ ಸರ್ಕಾರಕ್ಕೆ 8 ಕೋಟಿ ರೂಪಾಯಿಗಳ ಆರ್ಥಿಕ ನಷ್ಟ ಉಂಟುಮಾಡಿದ ಆರೋಪಕ್ಕಾಗಿ ಅವರ ವಿರುದ್ಧ ವಿಚಾರಣೆ ನಡೆಸಲು ಮೇಲೆ(1) ರಲ್ಲಿ ಓದಲಾದ ದಿನಾಂಕ: 9.6.1999ರ ನೋಟೀಸ್ ನೀಡುವ ಮೂಲಕ ವಿಚಾರಣೆಯನ್ನು ಪ್ರಾರಂಭಿಸಲಾಗಿತ್ತು. ಮೇಲೆ (2)ರಲ್ಲಿ ಓದಲಾದ ದಿನಾಂಕ:1.10.99 ಲಿಖಿತ ಉತ್ತರವನ್ನು ನೀಡಿದ ಆರೋಪಿತ ಅಧಿಕಾರಿಗಳಾದ ಶ್ರೀ ಹೆಚ್.ಎಸ್. ಸೇಠ್ ರವರು ತಮ್ಮ ಮೇಲಿನ ಆರೋಪವನ್ನು ಅಲ್ಲಗಳೆದು ತಮ್ಮ ಮೇಲಿನ ವಿಚಾರಣೆಯನ್ನು ಕೈಬಿಟ್ಟು ತಮ್ಮನ್ನು ಆರೋಪಮುಕ್ತರನ್ನಾಗಿಸುವಂತೆ ಕೋರಿದ್ದರು. ಇವರ ಮೇಲಿನ ದೋಷಾರೋಪಣೆಗಳ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ಮೇಲೆ (3)ರಲ್ಲಿ ಓದಲಾದ ದಿನಾಂಕ: 1.8.2002 ಮತ್ತು 5.8.2002ರ ಸರ್ಕಾರಿ ಆದೇಶ ಮತ್ತು ತಿದ್ದೋಲೆಯಲ್ಲಿ ಶ್ರೀ ಶಂತನು ಕನ್ಸುಲ್, ಐ.ಎ.ಎಸ್. ಸರ್ಕಾರದ ಪ್ರಧಾನ ಕಾರ್ಯದರ್ಶಿ ಅವರನ್ನು ವಿಚಾರಣಾಧಿಕಾರಿಯವರನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (5)ರಲ್ಲಿ ಓದಲಾದ ದಿನಾಂಕ:10.11.2004ರ ಪತ್ರದಲ್ಲಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ವಿಚಾರಣಾಧಿಕಾರಿಯವರು ವರದಿ ಮಾಡುತ್ತ ಶ್ರೀ ಹೆಚ್.ಎಸ್. ಸೇಠ್ ರವರು ಪ್ರಸ್ತಾವನೆಯನ್ನು ಅಂತಿಮವಾಗಿ ಅನುಮೋದಿಸಲು ಸೂಕ್ತ ಪ್ರಾಧಿಕಾರ ಯಾರು ಎಂಬುದನ್ನು ಮೇಲಾಧಿಕಾರಿಗಳಿಗೆ ಸೂಚಿಸಲಿಲ್ಲ ಎಂಬ ಆರೋಪಕ್ಕೆ ಶ್ರೀ ಹೆಚ್.ಎಸ್. ಸೇಠ್ ರವರೊಬ್ಬರೇ ಇದಕ್ಕೆ ಕಾರಣರೆಂದು ತೀರ್ಮಾನಕ್ಕೆ ಬರುವುದು ಸರಿಯಲ್ಲವೆಂದು ಸದರಿ ವಿಷಯದ ಬಗ್ಗೆ ಹಿಂದೆ ಅನುಸರಿಸಿರುವ ಪದ್ಧತಿಯನ್ನು ಇತರೆ ಯಾವ ಮೇಲಾಧಿಕಾರಿಗಳು ಗಮನಿಸಲಿಲ್ಲವೆಂದು ತಿಳಿಸಿ ಶ್ರೀ ಹೆಚ್.ಎಸ್. ಸೇಠ್ ರವರ ವಿರುದ್ಧ ಮಾಡಲಾದ ಆರೋಪ ಸಾಬೀತಾಗಿರುವುದಿಲ್ಲವೆಂದು ವರದಿ ಮಾಡಿದ್ದಾರೆ.

ಮೇಲ್ಕಂಡ ವಿಚಾರಣಾಧಿಕಾರಿಗಳ ವರದಿ ಮತ್ತು ತತ್ಸಂಬಂಧ ವಾಸ್ತವಾಂಶಗಳನ್ನು ಪರಿಶೀಲಿಸಿ ಶಿಸ್ತು ಪ್ರಾಧಿಕಾರವು ವಿಚಾರಣಾ ವರದಿಯನ್ನು ಒಪ್ಪಿಕೊಂಡು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 120 ಎಸ್‌ಇಎನ್ 97, ಬೆಂಗಳೂರು, ದಿನಾಂಕ: 6ನೇ ಜನವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ ಶ್ರೀ ಹೆಚ್.ಎಸ್. ಸೇಠ್, ಹೆಚ್ಚುವರಿ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಸೇವೆ ಇವರ ವಿರುದ್ಧ ಮಾಡಲಾದ ದೋಷಾರೋಪಣೆಗಳಿಂದ ಸದರಿಯವರನ್ನು ದೋಷಮುಕ್ತರನ್ನಾಗಿಸಿ ಆದೇಶಿಸಿದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಶ್ರೀ ಹೆಚ್.ಎಸ್. ಸೇಠ್ ರವರು ಯಾವ ಸೌಲಭ್ಯಗಳಿಗೆ ಅರ್ಹರಿದ್ದರೋ ಅಂತಹ ಎಲ್ಲ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 57 **ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3)

## ಇಂಧನ ಸಚಿವಾಲಯ

**ವಿಷಯ:** ಮೆಸರ್ಸ್ ಭಾವನ ಹೈಡ್ರೋ ಎಲೆಕ್ಟ್ರಿಕ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 800 ಕಿಲೊ ವ್ಯಾಟ್ ಸಾಮರ್ಥ್ಯದ ಗಂಗನದಾಳ ಕಿರುಜಲ ವಿದ್ಯುತ್ ಯೋಜನಾ ಸಾಮರ್ಥ್ಯವನ್ನು 1.25 ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 298 ಎನ್‌ಸಿಇ 2004, ದಿನಾಂಕ: 13.9.2004.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ / 06 / ಗಂಗನದಾಳ / 2004 / 1916, ದಿನಾಂಕ: 26.10.2004.

**ಪ್ರಸ್ತಾವನೆ:**

ಮೆಸರ್ಸ್ ಭಾವನ ಹೈಡ್ರೋ ಎಲೆಕ್ಟ್ರಿಕ್ ಪವರ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಗುಲ್ಬರ್ಗಾ ಜಿಲ್ಲೆಯ, ಶಹಪುರ ತಾಲ್ಲೂಕಿನ ಗಂಗನದಾಳ ಗ್ರಾಮದ ಶಹಪುರ ಬ್ರಾಂಚ್ ಕೆನಾಲ್‌ನ ಡಿಸ್ಟ್ರಿಬ್ಯೂಟರಿ-7ಕ್ಕೆ ಅಡ್ಡಲಾಗಿ 800 ಕಿಲೊ ವ್ಯಾಟ್ ಸಾಮರ್ಥ್ಯದ ಗಂಗನಾಳ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ಸದರಿ ಸ್ಥಳದಲ್ಲಿ ನೀರಿನ ಸಾಮರ್ಥ್ಯ ಹೆಚ್ಚಿಗೆ ಇರುವುದರಿಂದ ಹಾಗೂ ಮುಂದೆ ಇರುವ ಇನ್ನೊಂದು ಡ್ರಾಪ್ 6 ಮೀ.ನ್ನು ಉಪಯೋಗಿಸಿ ಇನ್ನೂ ಹೆಚ್ಚಿನ 450 ಕಿಲೋ ವ್ಯಾಟ್ ವಿದ್ಯುತ್ ಉತ್ಪಾದನೆ ಸಾಧ್ಯತೆ ಇರುವುದರಿಂದ ಸಾಮರ್ಥ್ಯವನ್ನು 1.25 ಮೆಗಾ ವ್ಯಾಟ್‌ಗೆ ಹೆಚ್ಚಿಸಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 298 ಎನ್‌ಸಿಇ 2004, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2004**

3. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಮೆಸರ್ಸ್ ಭಾವನ ಹೈಡ್ರೋ ಎಲೆಕ್ಟ್ರಿಕ್ ಪವರ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಮೇಲೆ (i)ರಲ್ಲಿ ಓದಲಾದ ಆದೇಶದಲ್ಲಿ ಗುಲ್ಬರ್ಗಾ ಜಿಲ್ಲೆಯ ಶಹಪುರ ತಾಲ್ಲೂಕಿನ ಗಂಗನಹಾಳ ಗ್ರಾಮದ ಶಹಪುರ ಬ್ರಾಂಚ್ ಕಾಲುವೆಯಲ್ಲಿ 800 ಕಿಲೊ ವ್ಯಾಟ್ ಸಾಮರ್ಥ್ಯದ ಗಂಗನದಾಳ ಕಿರು ಜಲ ವಿದ್ಯುತ್ ಯೋಜನೆಯನ್ನು 1.25 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

4. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗೇ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 58 **ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆಸರ್ಸ್ ಪಯೋನೀರ್ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಯ 24.75 ಮೆಗಾ ವ್ಯಾಟ್ ಸಾಮರ್ಥ್ಯದ ರಂಗನಾಥ ಸ್ವಾಮಿ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶದಲ್ಲಿ ಹೊಸ ಷರತ್ತನ್ನು ಸೇರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಂಇ 120 ಎನ್‌ಸಿಇ 2004, ದಿನಾಂಕ: 15.3.2004.

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ / 06 / ರಂಗನಾಥಸ್ವಾಮಿ / 2004 / 1963, ದಿನಾಂಕ: 30.10.2004.

**ಪ್ರಸ್ತಾವನೆ:**

ಮೇಲೆ (i)ರಲ್ಲಿ ಓದಲಾದ ಆದೇಶದಲ್ಲಿ ಮೆಸರ್ಸ್ ಚಾಣಕ್ಯ ಸಿಮೆಂಟ್ಸ್ ಲಿಮಿಟೆಡ್, ಈ ಕಂಪನಿಗೆ ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನ ಶಿವನಸಮುದ್ರ ಮೇಲ್ತೊರೆಯಲ್ಲಿ ಕಾವೇರಿ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಲಾದ 2 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನಾ ಸಾಮರ್ಥ್ಯವನ್ನು 24.75 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಮೆಸರ್ಸ್ ಪಯೋನೀರ್ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಗೆ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

2. ಸದರಿ ಆದೇಶದಲ್ಲಿ "ಐತಿಹಾಸಿಕ ಜಲಪಾತವಾದ ಶಿವನಸಮುದ್ರಂ ಜಲಪಾತದ ಸೌಂದರ್ಯಕ್ಕೆ ಹಾಗೂ ಕೆಳತೊರೆಯಲ್ಲಿ ಹಂಚಿಕೆ ಆಗಿರುವ ಯೋಜನೆಗಳಿಗೆ ಯಾವುದೇ ತರಹದ ಕುಂದಾಗಕೂಡದು ಹಾಗೂ ಧಕ್ಕೆಯಾಗಕೂಡದು" ಎಂಬ ಷರತ್ತನ್ನು ಸೇರಿಸಬೇಕೆಂದು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 341 ಎನ್‌ಸಿಇ 2004, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2004**

3. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೇಲೆ (1)ರ ಆದೇಶದಲ್ಲಿ ಮೆಸರ್ಸ್ ಚಾಣಕ್ಯ ಸಿಮೆಂಟ್ಸ್ ಲಿಮಿಟೆಡ್, ಕಂಪನಿಯ ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನ ಶಿವನಸಮುದ್ರಂ ಮೇಲ್ತೊರೆಯಲ್ಲಿ ಕಾವೇರಿ ನದಿಗೆ ಅಡ್ಡಲಾಗಿ 2 ಮೆಗಾ ವ್ಯಾಟ್‌ನಿಂದ 24.75 ಮೆಗಾ ವ್ಯಾಟ್‌ಗೆ ಹೆಚ್ಚಿಸಿರುವ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆಸರ್ಸ್ ಪಯೋನೀರ್ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಗೆ ಅನುಷ್ಠಾನ ಮಾಡಲು ಈ ಕೆಳಗಿನ ಷರತ್ತಿನೊಂದಿಗೆ ಅನುಮತಿ ನೀಡಲಾಗಿದೆ. "ಐತಿಹಾಸಿಕ ಜಲಪಾತವಾದ ಶಿವನಸಮುದ್ರಂ ಜಲಪಾತದ ಸೌಂದರ್ಯಕ್ಕೆ ಹಾಗೂ ಕೆಳತೊರೆಯಲ್ಲಿ ಹಂಚಿಕೆ ಆಗಿರುವ ಯೋಜನೆಗಳಿಗೆ ಯಾವುದೇ ತರಹದ ಕುಂದಾಗಕೂಡದು ಹಾಗೂ ಧಕ್ಕೆಯಾಗಕೂಡದು"

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 59 **ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ENERGY SECRETARIAT

**Sub:** Enhancement of Wind Power capacity from 50 M.W. to 55 M.W. in favour of M/s Suzlon Energy Limited at Jajikal Gudda, Bellary District.

**Read:** 1. Government Order No : DE 346 NCE 2004, dated : 9.11.2004.

2. Letter No : KRED / 08 / SEL / 2004 / 2273, dated : 14.12.2004 received from the Managing Director, Karnataka Renewable Energy Development Limited, Bangalore.

**Preamble:-**

In the Government Order read at (1) above, sanction was accorded enhancing the capacity of Wind Power capacity from 50 M.W. to 55 M.W. in favour of M/s Suzlon Energy Limited, at Jajikal Gudda, Bellary District.

2. In the letter read at (2) above, The Managing Director, Karnataka Renewable Energy Development Limited, Bangalore, has recommended for further enhancement of the wind power capacity from 50 M.W. to 55 M.W. in favour of M/s Suzlon Energy Limited at Jajikal Gudda, Bellary District.

3. Hence, the following Order

**Government Order No : DE 414 NCE 2004, Bangalore, Dated : 20th December 2004**

3. In the circumstances explained in the preamble, and after careful consideration Government are pleased to enhance the wind power capacity from 50 M.W. to 55 M.W. in favour of M/s Suzlon Energy Limited, at Jajikal Gudda, Bellary District as detailed below:-

| Government Order | Site with capacity enhanced in the Ist stage | Site with capacity enhanced in the IInd stage | Site with capacity enhanced in the IIIrd stage | Total capacity after enhancement in (M.W.) |
|---|---|---|---|---|
| DE 98 NCE 2000, Bangalore, dated:10.7.2000 DE 325 NCE 2002, Bangalore, dated : 21.12.2002 | Jajikal Gudda 42.5 M.W. | 50 M.W. | 5.00 M.W. (1250 kw) | 55.00 M.W. |

4. The other terms and conditions of the original Government Order read at 1 above are **IPSOFACTO** applicable.

By Order and in the name of the Governor of Karnataka,

P.R. 60

**K.L. JAYARAM**

Under Secretary to Government, Energy Department

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಶಿಕ್ಷಣ ಇಲಾಖೆಯ ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 31 ಸಸಿವಿ 2001 ದಿನಾಂಕ: 24.8.2001.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 57 ಸಸಿವಿ 2002 ದಿನಾಂಕ: 21.10.2002.
3. ಅಧಿಸೂಚನೆ ಸಂಖ್ಯೆ: ಸಿಆಸುಇ 57 ಸಸಿವಿ 2002 ದಿನಾಂಕ: 21.10.2002.
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 80 ಸಸಿವಿ 2003 ದಿನಾಂಕ: 23.10.2003.
5. ಅಧಿಸೂಚನೆ ಸಂಖ್ಯೆ: ಸಿಆಸುಇ 80 ಸಸಿವಿ 2003 ದಿನಾಂಕ: 23.10.2003.
6. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 92 ಸಸಿವಿ 2003 ದಿನಾಂಕ: 5.2.2004.
7. ಅಧಿಸೂಚನೆ ಸಂಖ್ಯೆ: ಸಿಆಸುಇ 92 ಸಸಿವಿ 2003 ದಿನಾಂಕ: 5.2.2004.
8. ಶಿಕ್ಷಣ ಇಲಾಖೆಯ ಕಡತ ಸಂಖ್ಯೆ: ಇಡಿ 36 ಡಿಪಿಐ 2001 (ಭಾಗ).

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರ ಸಚಿವಾಲಯದ ಶಿಕ್ಷಣ ಇಲಾಖೆಯ ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಯನ್ನು ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ ಹುದ್ದೆ ಎಂದು ಮರು ಪದನಾಮೀಕರಿಸಿ ಈ ಹುದ್ದೆಯನ್ನು ದಿನಾಂಕ:1.4.2004 ರಿಂದ 31.12.2004 ರವರೆಗೆ ಮುಂದುವರೆಸುವ ಬಗ್ಗೆ ಆದೇಶವನ್ನು ಕ್ರಮ ಸಂಖ್ಯೆ (6)ರಲ್ಲಿ ಓದಲಾದ ದಿನಾಂಕ: 5.2.2004ರ ಆದೇಶದಲ್ಲಿ ಹೊರಡಿಸಲಾಗಿರುತ್ತದೆ. ಹಾಗೂ ಶ್ರೀ ಕೆ. ಶ್ರೀಕಂಠೇಶ್ವರ, ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರನ್ನು ನಿಯೋಜನೆ ಮೇರೆಗೆ ಮುಂದುವರೆಸುವ ಆದೇಶವನ್ನು ಕ್ರಮ ಸಂಖ್ಯೆ (7)ರಲ್ಲಿ ಓದಲಾದ ದಿನಾಂಕ: 5.2.2004ರ ಅಧಿಸೂಚನೆಯಲ್ಲಿ ಹೊರಡಿಸಲಾಗಿರುತ್ತದೆ.

ಪ್ರಸ್ತುತ ಶಿಕ್ಷಣ ಇಲಾಖೆಯು ಕ್ರಮ ಸಂಖ್ಯೆ (8)ರಲ್ಲಿ ಓದಲಾದ ಕಡತದಲ್ಲಿ ಈ ಹುದ್ದೆಯನ್ನು ಮುಂದುವರೆಸುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತದೆ. ಆದುದರಿಂದ, ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 85 ಸಸಿವಿ 2004, ಬೆಂಗಳೂರು, ದಿನಾಂಕ: 3ನೇ ಜನವರಿ 2005**

ಕರ್ನಾಟಕ ಸರ್ಕಾರ ಸಚಿವಾಲಯದ ಶಿಕ್ಷಣ ಇಲಾಖೆಯ ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 1.1.2005 ರಿಂದ 31.3.2005 ರವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 61

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2)

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಎಂ.ಎಂ. ಪಾಟೀಲ, ಕಂದಾಯ ನಿರೀಕ್ಷಕರು, ಮುಂಡರಗಿ, ಇವರಿಗೆ ಶಿರಸ್ತೇದಾರ್ ವೃಂದಕ್ಕೆ ಮುಂಬಡ್ತಿ ನೀಡುವ ಬಗ್ಗೆ ಆದೇಶ.

**ಓದಲಾಗಿದೆ:**
1. ಜಿಲ್ಲಾಧಿಕಾರಿಗಳು ಗದಗ ಜಿಲ್ಲೆ ಅವರ ಪತ್ರ ಸಂಖ್ಯೆ ವಹಿ 81:99-2000 ದಿನಾಂಕ: 6.6.2003.

**ಪ್ರಸ್ತಾವನೆ:**

ಬೆಳಗಾವಿ ವಿಭಾಗದ ಪ್ರಥಮ ದರ್ಜೆ ಸಹಾಯಕರು: ಕಂದಾಯ ನಿರೀಕ್ಷಕರ ವೃಂದದ ಅಂತಿಮ ಕ್ರೋಢೀಕೃತ ಜೇಷ್ಠತಾ ಪಟ್ಟಿಯಲ್ಲಿನ ಜೇಷ್ಠತೆ ಆಧರಿಸಿ, ಶಿರಸ್ತೇದಾರ್ : ಉಪ ತಹಶೀಲ್ದಾರ್ ವೃಂದಕ್ಕೆ ಮುಂಬಡ್ತಿ ನೀಡಲು ನಡೆದ ಸಭೆಯ ನಡವಳಿಗಳಲ್ಲಿ, ಶ್ರೀ ಎಂ.ಎಂ. ಪಾಟೀಲ್ ಅವರು ದಿನಾಂಕ: 4.11.95 ರಲ್ಲಿ ಶಿರಸ್ತೇದಾರ್, ವೃಂದಕ್ಕೆ ಮುಂಬಡ್ತಿಗೆ ಅರ್ಹತೆ ಇತ್ತು. ಆದರೆ ಇವರ ಮೇಲೆ ಭ್ರಷ್ಟಾಚಾರ ಆಪಾದನೆ ಸಂಬಂಧದಲ್ಲಿ ಇವರ ವಿರುದ ಕ್ರಿಮಿನಲ್ ಪ್ರಕರಣ ಬಾಕಿ ಇದ್ದುದರಿಂದ, ಇವರ ಬಡ್ತಿಯ ಪರಿಣಾಮವನ್ನು ಮೊಹರಾದ ಲಕೋಟೆಗಳಲ್ಲಿ ಇಡಲಾಗಿರುತ್ತದೆ. ಈಗ ಇವರ ಮೇಲಿನ ಕ್ರಿಮಿನಲ್ ಇಲಾಖಾ ತನಿಖೆಗಳು ಅಂತಿಮವಾಗಿ ಇತ್ಯರ್ಥಗೊಂಡು ಇವರನ್ನು ಆಪಾದನೆಗಳಿಂದ ಮುಕ್ತಗೊಳಿಸಿರುತ್ತದೆ. ಶ್ರೀ ಎಂ.ಎಂ. ಪಾಟೀಲ್, ಇವರ ಹೆಸರು ಜೇಷ್ಠತೆಯಲ್ಲಿ ಕ್ರಮಸಂಖ್ಯೆ 1491 ರಲ್ಲಿ ನಮೂದಿಸಿದ್ದು, ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾದ ಕ್ರಮಸಂಖ್ಯೆ 1498 ರಲ್ಲಿ ನಮೂದಿಸಿರುವ ಶ್ರೀ ಎ.ಎಫ್. ಕಾರವಾರ ಇವರಿಗೆ ಬೆಳಗಾಂ ವಿಭಾಗಾಧಿಕಾರಿಗಳು ದಿನಾಂಕ: 4.11.95ರ ಆದೇಶದಲ್ಲಿ ಶಿರಸ್ತೇದಾರ್ ಹುದ್ದೆಗೆ ಮುಂಬಡ್ತಿ ನೀಡಿರುತ್ತಾರೆ. ಪ್ರಸ್ತುತ ವಿಭಾಗಾಧಿಕಾರಿಗಳ ಹುದ್ದೆಗಳು ರದ್ದಾದ ಹಿನ್ನೆಲೆಯಲ್ಲಿ ಓದಲಾದ (1)ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸಿರುತ್ತಾರೆ. ಪ್ರಸ್ತುತ ಇವರ ಮೇಲೆ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ ಹಾಗೂ ಹೂಡಲು ಉದ್ದೇಶಿಸಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ.

ಶ್ರೀ ಎಂ.ಎಂ. ಪಾಟೀಲ್, ಇವರ ಹೆಸರು ಕ್ರಮಸಂಖ್ಯೆ 1491 ರಲ್ಲಿ ನಮೂದಿಸಿದ್ದು, ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಎ.ಎಫ್. ಕಾರವಾರ ಇವರಿಗೆ ದಿನಾಂಕ: 4.11.1995ರ ಆದೇಶದಲ್ಲಿ ಶಿರಸ್ತೇದಾರ್ ಹುದ್ದೆಗೆ ಪದೋನ್ನತಿ ನೀಡಿರುವಂತೆ ಶ್ರೀ ಎಂ.ಎಂ. ಪಾಟೀಲ್ ರವರಿಗೆ ಸಹ ದಿನಾಂಕ: 4.11.1995 ರಿಂದ ಪೂರ್ವಾನ್ವಯವಾಗುವಂತೆ ಪ್ರಥಮ ದರ್ಜೆ ಸಹಾಯಕರ ಹುದ್ದೆಯಿಂದ ಶಿರಸ್ತೇದಾರ್ ಹುದ್ದೆಗೆ ಪದೋನ್ನತಿ ಹೊಂದಲು ಅರ್ಹರಾಗಿರುವುದರಿಂದ, ಪ್ರಸ್ತುತ ವಿಭಾಗಾಧಿಕಾರಿ ಕಛೇರಿ ರದ್ದುಗೊಳಿಸಿರುವುದರಿಂದ, ಸರ್ಕಾರದ ಹಂತದಿಂದ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 530 ಬಿಎಂಎಂ 2004, ದಿನಾಂಕ: 31ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಇಲಾಖಾ ಮುಂಬಡ್ತಿಯಿಂದ ಕೈಬಿಟ್ಟು ಹೋಗಿರುವ ಶ್ರೀ ಎಂ.ಎಂ. ಪಾಟೀಲ್, ಕಂದಾಯ ನಿರೀಕ್ಷಕರು, ಮುಂಡರಗಿ ಇವರ ಮೇಲಿನ ಕ್ರಿಮಿನಲ್ ಇಲಾಖಾ ವಿಚಾರಣೆಗಳು ಅಂತಿಮವಾಗಿ ಇತ್ಯರ್ಥಗೊಂಡು ಇವರು ಆಪಾದನೆಯಿಂದ ಮುಕ್ತರಾಗಿರುವ ಪ್ರಯುಕ್ತ ಸದರಿಯವರಿಗೆ ಜೇಷ್ಠತೆಯಲ್ಲಿ ಕಿರಿಯರಾದ ನೌಕರರಿಗೆ ಶಿರಸ್ತೇದಾರರಾಗಿ ಮುಂಬಡ್ತಿ ನೀಡಿದ ದಿನಾಂಕ: 4.11.1995 ರಿಂದ ಪೂರ್ವಾನ್ವಯವಾಗಿ ಶಿರಸ್ತೇದಾರರ:ಉಪ ತಹಶೀಲ್ದಾರರ ವೃಂದಕ್ಕೆ ಮುಂಬಡ್ತಿ ನೀಡಿದ ದಿನಾಂಕದಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ. 5200-00 ರಿಂದ 9580 ರಲ್ಲಿ ಶಿರಸ್ತೇದಾರ್: ಉಪ ತಹಶೀಲ್ದಾರ್ ಹುದ್ದೆಗೆ ಮುಂಬಡ್ತಿ ನೀಡಿ, ಆದೇಶಿಸಿದೆ. ಹಾಗೂ ಶ್ರೀ ಎಂ.ಎಂ. ಪಾಟೀಲ್ ಇವರಿಗೆ ಸಂಬಂಧಿಸಿದ ಜಿಲ್ಲಾಧಿಕಾರಿಗಳಾದ ಗದಗ್ ಜಿಲ್ಲೆ ಇವರು ಜಿಲ್ಲೆಯಲ್ಲಿ ಖಾಲಿ ಇರುವ ಶಿರಸ್ತೇದಾರ್: ತತ್ಸಮಾನ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 62

**ಡಿ.ಬಿ. ಗಣಾಚಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಸೇವೆಗಳು)

**ವಿಷಯ:** ರವೀಂದ್ರನಾಥ್ ಠಾಗೂರ್ ಇನ್ಸ್‌ಟಿಟ್ಯೂಟ್ ಈ ಸಂಸ್ಥೆಗೆ ನೇಮಕವಾಗಿರುವ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಕುರಿತು.

**ಉಲ್ಲೇಖ:**
1. ಸರ್ಕಾರಿ ಆದೇಶ ಸಂಖ್ಯೆ:ಕಂ.ಇ. 30 ಮುನೋಸೊ 2002, ದಿನಾಂಕ:11.4.2003.
2. ಸರ್ಕಾರಿ ಆದೇಶ ಸಂಖ್ಯೆ:ಕಂ.ಇ. 54 ಮುನೋಸೊ 2003, ದಿನಾಂಕ:17.5.2004.
3. ಆಡಳಿತಾಧಿಕಾರಿ, ರವೀಂದ್ರನಾಥ ಠಾಗೋರ್ ಇನ್ಸ್‌ಟಿಟ್ಯೂಟ್ ರವರ ಪತ್ರ ಸಂಖ್ಯೆ:ಸಿಬ್ಬಂದಿ:ಸಿಆರ್:49:2003-04, ದಿನಾಂಕ:7.10.2004.

**ಪ್ರಸ್ತಾವನೆ:**

ರವೀಂದ್ರನಾಥ್ ಠಾಗೂರ್ ಇನ್ಸ್‌ಟಿಟ್ಯೂಟ್ ಆರ್.ಟಿ. ನಗರ, ಬೆಂಗಳೂರು ಈ ಸಂಸ್ಥೆಯು ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ 11,12 ಮತ್ತು 13ಗಳನ್ನು ಉಲ್ಲಂಘನೆ ಮಾಡಿದ್ದರಿಂದ ಸಂಸ್ಥೆಗೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿತ್ತು. ನಂತರ ಕಾಲ ಕಾಲಕ್ಕೆ, ಆಡಳಿತಾಧಿಕಾರಿ ಅವಧಿ ವಿಸ್ತರಿಸಿಕೊಂಡು ಬರಲಾಗಿದ್ದು, ಮೇಲೆ-(2)ರಲ್ಲಿ ಓದಲಾದ ಆದೇಶದಲ್ಲಿ ವಿಸ್ತರಿಸಲಾಗಿದ್ದ ಆಡಳಿತಾಧಿಕಾರಿ ಅವಧಿಯು ದಿನಾಂಕ:10.10.2004ಕ್ಕೆ ಕೊನೆಗೊಂಡಿದ್ದು, ಮೇಲೆ ಓದಲಾದ-(3)ರಲ್ಲಿ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಲು ಕೋರಿರುತ್ತಾರೆ. ಸದರಿಯವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂ.ಇ. 54 ಮುನೋಸೊ 2003, ಬೆಂಗಳೂರು, ದಿನಾಂಕ: 21ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರವೀಂದ್ರನಾಥ್ ಠಾಗೂರ್ ಇನ್ಸ್‌ಟಿಟ್ಯೂಟ್, ರಾಮಯ್ಯ ಗಾರ್ಡನ್, ಗಣೇಶ್ ಬ್ಲಾಕ್, ದಿಣ್ಣೂರು ಮುಖ್ಯರಸ್ತೆ, ಆರ್.ಟಿ. ನಗರ, ಬೆಂಗಳೂರು-32 ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ 27-ಎ ಪ್ರಕಾರ ನೇಮಕವಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ:11.10.2004 ರಿಂದ 10.2.2005ರವರೆಗೆ ವಿಸ್ತರಿಸಲಾಗಿದೆ. ಆಡಳಿತಾಧಿಕಾರಿಗಳು ದಿನಾಂಕ:10.2.2005ರೊಳಗಾಗಿ ಸಂಘದ ಅವ್ಯವಹಾರಗಳನ್ನು ಸರಿಪಡಿಸಿ ಕಡ್ಡಾಯವಾಗಿ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 63

**ಎಂ.ಪಿ. ಮಂಜುನಾಥ್**

ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ರಾಜ್ಯದಲ್ಲಿ ಹಳದಿ ಪಡಿತರ ಚೀಟಿ ಯೋಜನೆಯನ್ನು ಸಮರ್ಪಕವಾಗಿ ಜಾರಿಗೆ ತರಲು ಪುನರ್ ಸಮೀಕ್ಷೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ: ಆನಾಸ 192 ಡಿಆರ್‌ಎ 2000 ದಿನಾಂಕ: 8.8.2000.
2. ಸರ್ಕಾರಿ ಆದೇಶ ಸಂ: ಆನಾಸ 192 ಡಿಆರ್‌ಎ 2000 ದಿನಾಂಕ: 3.11.2000.
3. ಸರ್ಕಾರಿ ಆದೇಶ ಸಂ: ಆನಾಸ 192 ಡಿಆರ್‌ಎ 2000(ಭಾಗ-6) ದಿನಾಂಕ: 22.12.2001.
4. ಸರ್ಕಾರಿ ಆದೇಶ ಸಂ: ಆನಾಸ 192 ಡಿಆರ್‌ಎ 2000(ಭಾಗ-6) ದಿನಾಂಕ: 4.2.2003.
5. ಸರ್ಕಾರಿ ಆದೇಶ ಸಂ: ಆನಾಸ 192 ಡಿಆರ್‌ಎ 2000(ಭಾಗ-9) ದಿನಾಂಕ: 18.12.2003.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯದಲ್ಲಿ ಹಳದಿ ಪಡಿತರ ಚೀಟಿಯ ಯೋಜನೆಯು ದಿ:1.11.2003ರಿಂದ ಜಾರಿಗೆ ಬಂದಿದ್ದು, ಮೇಲೆ ಓದಲಾದ ಸರ್ಕಾರಿ ಆದೇಶಗಳಲ್ಲಿ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳನ್ನು ಗುರುತಿಸಿ ಪಡಿತರ ಚೀಟಿಯನ್ನು ವಿತರಿಸಲು ಆದೇಶಿಸಲಾಗಿತ್ತು.

ರಾಜ್ಯದಲ್ಲಿ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳನ್ನು ಗುರುತಿಸಿ ಈ ಪಡಿತರ ಚೀಟಿಯನ್ನು ಕೊಡುವಲ್ಲಿ ಕೆಲವು ಅರ್ಹ ಕುಟುಂಬಗಳು ಕೈಬಿಟ್ಟಿದ್ದು, ಅನರ್ಹ ಕುಟುಂಬಗಳು ಪಡಿತರ ಚೀಟಿಯನ್ನು ಹೊಂದಿರುವುದಾಗಿ ಸಾರ್ವಜನಿಕರಿಂದ/ಜನಪ್ರತಿನಿಧಿಗಳಿಂದ ದೂರುಗಳು ಬಂದಿರುವುದನ್ನು ಗಮನಿಸಿ, ರಾಜ್ಯ ಸರ್ಕಾರವು ಅನರ್ಹ ಕುಟುಂಬಗಳು ಹೊಂದಿದ ಪಡಿತರ ಚೀಟಿಗಳನ್ನು ರದ್ದುಪಡಿಸಿ, ಅರ್ಹ ಕುಟುಂಬಗಳಿಗೆ ಪಡಿತರ ಚೀಟಿಗಳನ್ನು ನೀಡಲು, ಗ್ರಾಮ ಹಾಗೂ ಪಟ್ಟಣ ಪ್ರದೇಶದ ವಾರ್ಡುಗಳಲ್ಲಿ ಪಾರದರ್ಶಕ ರೀತಿಯಲ್ಲಿ ಪುನರ್ ಮನೆ ಮನೆ ಸಮೀಕ್ಷೆ ನಡೆಸಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಆದೇಶ ಸಂಖ್ಯೆ: ಆನಾಸ 114 ಡಿಆರ್‌ಎ 2004, ಬೆಂಗಳೂರು, ದಿನಾಂಕ: 10ನೇ ಜನವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

1. ಅನರ್ಹ ಕುಟುಂಬಗಳು ಹೊಂದಿದ ಪಡಿತರ ಚೀಟಿಗಳನ್ನು ರದ್ದುಪಡಿಸಿ ಅರ್ಹ ಕುಟುಂಬಗಳಿಗೆ ಪಡಿತರ ಚೀಟಿಗಳನ್ನು ನೀಡಲು ಗ್ರಾಮ ಹಾಗೂ ಪಟ್ಟಣ ಪ್ರದೇಶದ ವಾರ್ಡುಗಳಲ್ಲಿ ಪಾರದರ್ಶಕ ರೀತಿಯಲ್ಲಿ ಪುನರ್ ಸಮೀಕ್ಷೆ ನಡೆಸಿ ಗ್ರಾಮ ಸಭೆಗಳ ಅನುಮೋದನೆ ಪಡೆಯುವುದು.

2. ಈ ಪುನರ್ ಸಮೀಕ್ಷೆ ಕಾರ್ಯವನ್ನು ಕಂದಾಯ/ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್/ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಮತ್ತು ನಗರಾಭಿವೃದ್ಧಿ ಇಲಾಖೆಯ ಅಧಿಕಾರಿಗಳು ಒಟ್ಟುಗೂಡಿ ಸಮೀಕ್ಷೆಯನ್ನು ನಡೆಸುವುದು.

3. ಗ್ರಾಮ ಮತ್ತು ವಾರ್ಡುಗಳಲ್ಲಿ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ, ಕಂದಾಯ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಮತ್ತು ನಗರಾಭಿವೃದ್ಧಿ ಇಲಾಖೆಗಳ ಸಿಬ್ಬಂದಿಗಳ ಜೊತೆಯಲ್ಲಿ ಗ್ರಾಮದ ಮಹಿಳಾ ಸ್ವಸಹಾಯ ಸಂಘ ಹಾಗೂ ರಚನಾತ್ಮಕ ಕಾರ್ಯಗಳಲ್ಲಿ ತೊಡಗಿರುವ ಇತರೆ ಗ್ರಾಮೀಣ ಮಟ್ಟದ ಸಂಘ ಸಂಸ್ಥೆಗಳ ಸದಸ್ಯರುಗಳನ್ನೊಳಗೊಂಡ ಸಮಿತಿಯನ್ನು ರಚಿಸಿ ಸಮೀಕ್ಷಾ ಕಾರ್ಯವನ್ನು ಕೈಗೊಳ್ಳುವುದು.

4. ಮೇಲೆ ತಿಳಿಸಿರುವ ಇಲಾಖೆಗಳ ಜೊತೆಗೆ ಇತರೆ ಇಲಾಖೆಗಳ ಅಧಿಕಾರಿಗಳು ಹಾಗೂ ಸಿಬ್ಬಂದಿಯವರ ಸಹಕಾರವನ್ನು ಪಡೆಯುವುದು. ಸಮೀಕ್ಷಾ ಪೂರ್ವದಲ್ಲಿ ರಾಜ್ಯ/ಜಿಲ್ಲಾ/ತಾಲ್ಲೂಕು/ಗ್ರಾಮ ಮಟ್ಟಗಳಲ್ಲಿ ಸಮೀಕ್ಷಾ ಸಿಬ್ಬಂದಿ ಹಾಗೂ ಅಧಿಕಾರಿಗಳಿಗೆ ತರಬೇತಿ ನೀಡುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು.

5. ಗ್ರಾಮ ಸಭೆಗಳ ದಿನಾಂಕವನ್ನು ಹಾಗೂ ಸಮೀಕ್ಷೆಯ ವೇಳಾ ಪಟ್ಟಿಯನ್ನು ನಿಗದಿಪಡಿಸಿ ಮುಂಚಿತವಾಗಿಯೇ ಅಗತ್ಯ ಪ್ರಚಾರವನ್ನು ನೀಡುವುದು. ಈಗಾಗಲೇ ಚಾಲ್ತಿಯಲ್ಲಿರುವ ಪಡಿತರ ಚೀಟಿ ಪಟ್ಟಿಗಳನ್ನು ನ್ಯಾಯಬೆಲೆ ಅಂಗಡಿಗಳಿಗೆ ಸೂಚನಾ ಫಲಕಗಳಲ್ಲಿ ಸಾರ್ವಜನಿಕರ ಮಾಹಿತಿಗಾಗಿ ಕಾರ್ಡುಗಳ ಪಟ್ಟಿಯನ್ನು ಪ್ರಕಟಿಸುವುದು.

6. ಸಮೀಕ್ಷಾ ಕಾರ್ಯ ಸಮರ್ಪಕವಾಗಿ ಹಾಗೂ ಪರಿಣಾಮಕಾರಿಯಾಗಿ ನಡೆಸಲು ಜಿಲ್ಲೆಯಲ್ಲಿರುವ ಪ್ರಮುಖ ಅಧಿಕಾರಿಗಳನ್ನು ಮೇಲುಸ್ತುವಾರಿ ಕಾರ್ಯಕ್ರಮಕ್ಕೆ ಬಳಸಿಕೊಳ್ಳುವುದು.

7. ಈ ಸಮೀಕ್ಷೆಯನ್ನು 2005ನೇ ಸಾಲಿನ ಜನವರಿ ಮಾಹೆಯಲ್ಲಿ ಪ್ರಾರಂಭಿಸಿ ಮಾರ್ಚ್ ಅಂತ್ಯದೊಳಗೆ ಮುಕ್ತಾಯಗೊಳಿಸುವುದು.

ಅನರ್ಹರನ್ನು ಗುರುತಿಸುವ ಸಂಬಂಧ ಈ ಕೆಳಕಂಡ ಮಾನದಂಡಗಳನ್ನು ಅನುಸರಿಸುವುದು.

(1) ಎರಡು ಹೆಕ್ಟೇರ್ ಅಥವಾ ಅದಕ್ಕಿಂತ ಹೆಚ್ಚು ಭೂಮಿ ಹೊಂದಿರುವವರು.
(2) ದೂರವಾಣಿ ಹಾಗೂ ಸೆಲ್‌ಫೋನ್ ಹೊಂದಿರುವವರು
(3) ಸ್ವಂತವಾಗಿ ಯಾರೇ ಡೀಸೆಲ್/ಪೆಟ್ರೋಲ್ ಇಂಧನ ಬಳಸುವ ವಾಹನ ಹೊಂದಿರುವವರು
(4) ಬ್ಯಾಂಕ್/ಸಹಕಾರಿ ಸಂಘಗಳಲ್ಲಿ 1.00 ಲಕ್ಷಕ್ಕೂ ಮೇಲ್ಪಟ್ಟು ಸಾಲ ಪಡೆದಿರುವವರು
(5) ಒಂದು ಬೋರ್ ವೆಲ್ ಹೊಂದಿ, ನೀರಾವರಿ ಸೌಕರ್ಯ ಪಡೆಯುತ್ತಿರುವವರು
(6) ತಿಂಗಳಿಗೆ ರೂ.1,000/-ಕ್ಕೆ ಕಡಿಮೆ ಇಲ್ಲದೆ ವೇತನ ಪಡೆಯುವ ಸರ್ಕಾರಿ/ಸರ್ಕಾರೇತರ/ಖಾಸಗಿ ಸಿಬ್ಬಂದಿಗಳು
(7) ಆದಾಯ ತೆರಿಗೆ ಪಾವತಿಸುವವರು
(8) Registered contractors, APMC Traders/Commission Agents/Dealers in Seeds/Fertilisers, etc.
(9) ಒಟ್ಟಾರೆ ಸಮೀಕ್ಷೆ ಮಾಡುವ ಸಂದರ್ಭದಲ್ಲಿ ಕುಟುಂಬದ ಜೀವನಮಟ್ಟವನ್ನೂ ಕೂಡ ಸಮೀಕ್ಷೆ ಮಾಡಿ ನಿರ್ಣಯಿಸುವುದು.

2. ಆಯ್ಕೆಗೊಂಡು ಅರ್ಹ ಕುಟುಂಬದ ಮಾಹಿತಿ ಮತ್ತು ತಿರಸ್ಕೃತಗೊಂಡ ಕುಟುಂಬದ ಮಾಹಿತಿ ಇವೆರಡನ್ನೂ ಗ್ರಾಮಸಭೆಗಳ ಮುಂದಿಟ್ಟು, ಗ್ರಾಮ ಸಭೆಯ ಅನುಮೋದನೆ ಪಡೆಯುವ ಬಗ್ಗೆ ಸೂಕ್ತ ನಿರ್ದೇಶನವನ್ನು ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಆಯುಕ್ತರು ನೀಡುವುದು.

3. ಮನೆ-ಮನೆ ಪುನರ್ ಸಮೀಕ್ಷೆ ಪೂರ್ಣಗೊಂಡ ನಂತರ ಅನರ್ಹ ಕುಟುಂಬಗಳು ಹೊಂದಿರುವ ಕಾರ್ಡುಗಳನ್ನು ರದ್ದುಪಡಿಸಿ, ಅರ್ಹ ಕುಟುಂಬಗಳನ್ನು ಗುರುತಿಸಿ ಅವರುಗಳಿಗೆ ಬಿಪಿಎಲ್ ಕಾರ್ಡು ಕೊಡುವುದು, ರದ್ದುಪಡಿಸಿದ ಕಾರ್ಡಿನ ಪರ್ಯಾಯವಾಗಿ ಎಪಿಎಲ್ ಕಾರ್ಡನ್ನು ವಿತರಿಸಲು ಕ್ರಮ ವಹಿಸುವುದು.

4. ಮನೆ-ಮನೆ ಪುನರ್ ಸಮೀಕ್ಷೆ ಪೂರ್ಣಗೊಂಡ ನಂತರ ಅರ್ಹ ಕುಟುಂಬಗಳ ಬಗ್ಗೆ ಮಾಹಿತಿಯನ್ನು ಜಿಲ್ಲಾಧಿಕಾರಿಗಳು ಆಯುಕ್ತರು,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆರವರಿಗೆ ಒದಗಿಸುವುದು ಹಾಗೂ ಆಯುಕ್ತರು ಇಡೀ ರಾಜ್ಯದ ಮಾಹಿತಿಯನ್ನು ಕ್ರೋಢೀಕರಿಸಿ ಸರ್ಕಾರಕ್ಕೆ ಒದಗಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎನ್. ಶಾಂತಕುಮಾರಿ**

ಪಿ.ಆರ್. 64 ಸರ್ಕಾರದ ಅಧೀನ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## ಇಂಧನ ಸಚಿವಾಲಯ

**ವಿಷಯ:** ಮೆಸರ್ಸ್ ಸಾಯಿತೇಜ ಎನರ್ಜೀಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 1 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ / 06 / ಹಿರಯನೂರ / 2004 / 1993, ದಿನಾಂಕ: 2.11.2004.

2. ದಿನಾಂಕ: 4.12.2004 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (i)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ ಸಾಯಿತೇಜ ಎನರ್ಜೀಸ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಗುಲ್ಬರ್ಗ ಜಿಲ್ಲೆಯ ಯಾದಗೀರ್ ತಾಲ್ಲೂಕಿನ ಹಿರಯನೂರ ಗ್ರಾಮದ ಬಳಿ ಭೀಮಾ ನದಿಗೆ ಅಡ್ಡಲಾಗಿ 1 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿಯು ಅನುಮೋದಿಸಿದೆ. ಇದನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 377 ಎನ್‌ಸಿಇ 2004, ಬೆಂಗಳೂರು, ದಿನಾಂಕ: 21ನೇ ಡಿಸೆಂಬರ್ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಸಾಯಿತೇಜ ಎನರ್ಜೀಸ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಗುಲ್ಬರ್ಗ ಜಿಲ್ಲೆಯ ಯಾದಗೀರ್ ತಾಲ್ಲೂಕಿನ ಹಿರಯನೂರ ಗ್ರಾಮದ ಬಳಿ ಭೀಮಾ ನದಿಗೆ ಅಡ್ಡಲಾಗಿ 1 ಮೆಗಾ ವ್ಯಾಟ್ ಸಾಮರ್ಥ್ಯದ ತೊಕಾಪುರ ಕಿರು ಜಲ ವಿದ್ಯುತ್ ಯೋಜನೆಯನ್ನು, (ಲಾಂಜಿಟ್ಯೂಡ್ 77-10'-22" ಪವರ್ ಹೌಸ್, 77-10'-11" ಬ್ಯಾರೇಜ್ ಪೂರ್ವ ಮತ್ತು ಲ್ಯಾಟಿಟ್ಯೂಡ್ 16-33'-55" ಪವರ್ ಹೌಸ್, 16-34'-05" ಬ್ಯಾರೇಜ್ ಉತ್ತರ) ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:-

1.(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2.(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಅರಣ್ಯ, ಸಂಪನ್ಮೂಲ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 65 **ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಕೊಡಗು ಜಿಲ್ಲೆಯ ಸೋಮವಾರಪೇಟೆ ತಾಲ್ಲೂಕಿನ ಗ್ರಾಮೀಣ ಸಂಪರ್ಕ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಕುರಿತು.

**ಓದಲಾಗಿದೆ:** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ: ರಸ್ತೆಶಾಖೆ:ಮೇಲ್ದರ್ಜೆ:ಸಇಂ7:2004-05, ದಿನಾಂಕ:24.12.04.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಕೊಡಗು ಜಿಲ್ಲೆ ಸೋಮವಾರಪೇಟೆ ತಾಲ್ಲೂಕಿನ ಈ ಕೆಳಕಂಡ 2 ಗ್ರಾಮೀಣ ಸಂಪರ್ಕ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

1. ಹೆಬ್ಬಾಳೆ ಸೂಳೆಕೋಟೆ ಕಣಿವೆ ಚಿಕ್ಕಕರಮರಹಳ್ಳಿ ರಸ್ತೆ 5.00 ಕಿ.ಮೀ
2. ಕಾನನಕಾಡು ವಾಲ್ನೂರು ಕೃಷ್ಣಾಪುರ ಅಮ್ಮಂಗಾಲ ರಸ್ತೆ 7.00 ಕಿ.ಮೀ

**ಸರ್ಕಾರಿ ಆದೇಶ ಸಂಖ್ಯೆ: ಲೋಇ 27 ಸಿಆರ್‌ಎಂ 2004, ಬೆಂಗಳೂರು, ದಿನಾಂಕ:5ನೇ ಜನವರಿ 2005**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ 2 ಗ್ರಾಮೀಣ ಸಂಪರ್ಕ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

1. ಹೆಬ್ಬಾಳೆ ಸೂಳೆಕೋಟೆ ಕಣಿವೆ ಚಿಕ್ಕಕರಮರಹಳ್ಳಿ ರಸ್ತೆ 5.00 ಕಿ.ಮೀ
2. ಕಾನನಕಾಡು ವಾಲ್ನೂರು ಕೃಷ್ಣಾಪುರ ಅಮ್ಮಂಗಾಲ ರಸ್ತೆ 7.00 ಕಿ.ಮೀ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 66 **ಶೇಖ್ ಅಬ್ದುಲ್ ವಾಜಿದ್**

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸಂಪರ್ಕ)

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಸಂತಕವಿ ಕನಕದಾಸ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದ ವಿದ್ಯಾ ಸಂಸ್ಥೆ, ಬೆಳವಿಗಿ, ಹಾವೇರಿ ತಾ: ಮತ್ತು ಜಿಲ್ಲೆ, ಈ ಸಂಸ್ಥೆಗೆ ನೇಮಕ ಮಾಡಲಾದ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಕಂ.ಇ. 26 ಮುನೊಸೊ 2003, ದಿನಾಂಕ:29.12.2003.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಸಂತಕವಿ, ಕನಕದಾಸ ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡದ ವಿದ್ಯಾ ಸಂಸ್ಥೆ, ಬೆಳವಿಗಿ, ಹಾವೇರಿ ಜಿಲ್ಲೆ, ಹಾವೇರಿ ಈ ಸಂಸ್ಥೆಯು ಸಂಘದ ಲೆಕ್ಕಪತ್ರಗಳನ್ನು, ಕಾರ್ಯಕಾರಿ ಸಮಿತಿಯ ಪಟ್ಟಿಯನ್ನು ಸಲ್ಲಿಸದೇ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 11,12 ಮತ್ತು 13ಗಳನ್ನು ಉಲ್ಲಂಘನೆ ಮಾಡಿದ್ದರಿಂದ ಸದರಿ ಸಂಸ್ಥೆಯನ್ನು ಸರಿದಾರಿಗೆ ತರುವ ದೃಷ್ಟಿಯಿಂದ ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ-27ಎ ಪ್ರಕಾರ, ತಹಶೀಲ್ದಾರ್, ಹಾವೇರಿ ತಾಲ್ಲೂಕು ಇವರನ್ನು 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಕ ಮಾಡಿ ಆದೇಶಿಸಲಾಗಿತ್ತು. ಸದರಿ ಅವಧಿಯು ದಿನಾಂಕ: 29.6.2004ಕ್ಕೆ ಮುಕ್ತಾಯಗೊಂಡಿದ್ದು, ಸಂಸ್ಥೆಗೆ ಚುನಾವಣೆಯನ್ನು ನಡೆಸಲು ಸಾಧ್ಯವಾಗಿರುವುದಿಲ್ಲವಾದ್ದರಿಂದ ಆಡಳಿತಾಧಿಕಾರಿಯವರ ಅವಧಿಯನ್ನು ದಿನಾಂಕ:30.6.2004 ರಿಂದ 29.12.2004 ಮತ್ತು 30.12.2004 ರಿಂದ 29.6.2005ರವರೆಗೆ ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಕಂ.ಇ. 26 ಮುನೋಸೊ 2003, ಬೆಂಗಳೂರು, ದಿನಾಂಕ: 23ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಸಂತಕವಿ ಕನಕದಾಸ ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡದ ವಿದ್ಯಾಸಂಸ್ಥೆ, ಬೆಳವಿಗಿ, ಹಾವೇರಿ ತಾಲ್ಲೂಕು ಮತ್ತು ಜಿಲ್ಲೆ ಈ ಸಂಸ್ಥೆಗೆ ಸಾರ್ವಜನಿಕ ಹಿತದೃಷ್ಟಿಯಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ-27ಎ ಪ್ರಕಾರ ತಹಶೀಲ್ದಾರ್, ಹಾವೇರಿ ತಾಲ್ಲೂಕು, ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದ್ದ ಅವಧಿಯನ್ನು ದಿನಾಂಕ:30.6.2004 ರಿಂದ 29-12-2004 ಮತ್ತು 30-12-2004 ರಿಂದ 29.6.2005ರವರೆಗೆ ವಿಸ್ತರಿಸಿ ಆದೇಶಿಸಿದೆ.

ಈ ವಿಸ್ತರಣಾ ಅವಧಿಯೊಳಗೆ ಆಡಳಿತಾಧಿಕಾರಿಯವರು ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 67 **ಎಂ.ಪಿ. ಮಂಜುನಾಥ್**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

## ಇಂಧನ ಸಚಿವಾಲಯ

**ವಿಷಯ:** ಮೆಸರ್ಸ್ ಇಂಟರ್‌ಸೇಲ್ಸ್ ಸಪ್ಲೈಸ್ ಲಿಮಿಟೆಡ್ ಕಂಪನಿಗೆ 1 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ / 06 / ರೇವತ್‌ಗಾಂವ್ / 2004 / 1566, ದಿನಾಂಕ: 21.8.2004.

2. ದಿನಾಂಕ: 4.12.2004 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಕೆಗಳು.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (i)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ ಇಂಟರ್ ಸೇಲ್ಸ್ ಸಪ್ಲೈಸ್ ಲಿಮಿಟೆಡ್ ಈ ಕಂಪನಿಗೆ ಬಿಜಾಪುರ ಜಿಲ್ಲೆಯ ರೇವತ್‌ಗಾಂವ್ ಗ್ರಾಮದ ಭೀಮಾ ನದಿಗೆ ಅಡ್ಡಲಾಗಿ 1 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿಯು ಅನುಮೋದಿಸಿದೆ. ಇದನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 302 ಎನ್‌ಸಿಇ 2004, ಬೆಂಗಳೂರು, ದಿನಾಂಕ: 21ನೇ ಡಿಸೆಂಬರ್ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಇಂಟರ್ ಸೇಲ್ಸ್ ಸಪ್ಲೈಸ್ ಲಿಮಿಟೆಡ್ ಈ ಕಂಪನಿಗೆ ಬಿಜಾಪುರ ಜಿಲ್ಲೆಯ ರೇವತ್‌ಗಾಂವ್ ಗ್ರಾಮದ ಭೀಮಾ ನದಿಗೆ ಅಡ್ಡಲಾಗಿ 1 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು, ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:-

1.(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2.(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಅರಣ್ಯ, ಸಂಪನ್ಮೂಲ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಅವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 68

**ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆಸರ್ಸ್ ಅನ್ನಪೂರ್ಣೇಶ್ವರಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 1.2 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ:**

1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ / 06 / ಮುಡಬ / 2004 / 2106, ದಿನಾಂಕ: 23.11.2004.
2. ದಿನಾಂಕ: 4.12.2004 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (i)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ ಅನ್ನಪೂರ್ಣೇಶ್ವರಿ ಪವರ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ನಾರಾಯಣಪುರ RBCಯ 93 ಮತ್ತು 94ನೇ ಕಿ.ಮೀ. ಚೈನೇಜಿನಲ್ಲಿ 1.2 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿಯು ಅನುಮೋದಿಸಿದೆ. ಇದನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 399 ಎನ್‌ಸಿಇ 2004, ಬೆಂಗಳೂರು, ದಿನಾಂಕ: 21ನೇ ಡಿಸೆಂಬರ್ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಅನ್ನಪೂರ್ಣೇಶ್ವರಿ ಪವರ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ನಾರಾಯಣಪುರ RBCಯ 93 ಮತ್ತು 94ನೇ ಕಿ.ಮೀ. ಚೈನೇಜಿನಲ್ಲಿ 1.2 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು, ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:-

1.(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2.(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಅರಣ್ಯ, ಸಂಪನ್ಮೂಲ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 69

**ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ENERY SECRETARIAT

**Sub:** Enhancement of Wind Power Capacity of M/s Chitradurga Wind Power (P) Limited - reg.

**Read:**
1. Government Order No : DE 124 NCE 2002, dated : 31.5.2002.
2. Govt. Order No. DE 124 NCE 2002 dated 5.3.2003.
3. Letter No : KRED / 08 / CWP / 2003/03 dated : 1.1.2004 of the Managing Director, KREDL.
4. Letter No : KRED / 08 / CWP / 2004/2239 dated : 8.12.2004 of the Managing Director, KREDL.

**Preamble:-**

In the Government Order dated 31.5.2002 and 5.3.2003 cited (1) and (2) above, M/s Chitradurga Wind Power (P) Limited was allocated Wind Power Projects as indicated below:-

| Sl. No. | Geographical areas and their Map Nos. | | Capacity allotted in (MW) | |
|---|---|---|---|---|
| | **Chitradurga District** | | | |
| 1. | Jogimatti-I | {57B/8} | 10 MW | |
| 2. | Jogimatti-II | {57C/5} | 16 MW | |
| 3. | Jogimatti-III | {57C/9} | 08 MW | |
| 4. | $^{3}/_{4}$ West of Jogimatti | {57B/4} | 12 MW | |
| | **Davanagere District** | | | |
| 5. | Harapanahalli | {48M/13} | 21 MW | |
| | **Shimoga District** | | | |
| 6. | Thuppadahalli | {57C/1} | 15 MW | |

| Sl. No. | Geographical areas and their Map Nos. | Capacity allotted in (MW) | |
|---|---|---|---|
| | **Gadag District** | | |
| 7. | Kappadagudda | | |
| | • Area-1 {48M/11} 4 MW | | |
| | • Area-2 {48M/11} 3 MW | | 39 MW |
| | • Area-3 {48M/11} 4 MW | | |
| | • Area-4 {48M/12} 3 MW | | |
| | • Area-5 {48M/12} 8 MW | | |
| | • Area-6 {48M/12} 2 MW | | |
| | **Total** | | **106 MW** |

2. The Managing Director, Karnataka Renewable Energy Development Limited in his letter dated 1.1.2004 and 8.12.2004 cited (3) and (4) above, has intimated that M/s Chitradurga Wind Power (P) Limited have taken up contour survey at a few locations in their allotment and have assessed installable potential in those areas considering higher capacities WTG's (400 KV to 950 KV WTG's and has further intimated that there is enough place to develop Wind Power Projects and has therefore recommended for enhancement of the capacity from the existing 64 MW to 247 MW (with an additional 183 MW) as indicated below:-

| Sl. No. | Geographical areas and their Map Nos. | | Capacity allotted in (MW) | Capacity proposed for enhancement | Total capacity that can hold at each location in (MW) |
|---|---|---|---|---|---|
| | **Chitradurga District** | | | | |
| 1. | Jogimatti-II | {57C/5} | 16MW | 41 MW | 57 MW |
| 2. | Jogimatti-II | {57C/9} | 08 MW | 49 MW | 57 MW |
| | **Davangere District** | | | | |
| 3. | Harapanahalli | {48M/13} | 21 MW | 55 MW | 76 MW |
| | **Shimoga District** | | | | |
| 4. | Thuppadahalli | {57C/1} | 15 MW | 32.5 MW | 47.5 MW |
| | **Gadag District** | | | | |
| 5. | Kappadagudda | | | | |
| | **Area-3** | **{48M/11}** | **4 MW** | **5.5 MW** | **9.5 MW** |
| | **Total** | | **64 MW** | **183 MW** | **247 MW** |

3. The proposal has been examined and hence, the order.

**Government Order No : EN 31 NCE 2004, Bangalore, Dated : 17th December 2004**

4. In the circumstances explained in the preamble, Government are pleased to enhance the Wind Power Capacity from the existing 64 MW to 247 MW (with an addition 183 MW) to M/s Chitradurga Wind Power (P) Limited as indicated below:-

| Sl. No. | Geographical areas and their Map Nos. | | Capacity allotted in (MW) | Capacity proposed for enhancement | Total capacity that can hold at each location in (MW) |
|---|---|---|---|---|---|
| | **Chitradurga District** | | | | |
| 1. | Jogimatti-II | {57C/5} | 16MW | 41 MW | 57 MW |
| 2. | Jogimatti-III | {57C/9} | 08 MW | 49 MW | 57 MW |
| | **Davangere District** | | | | |
| 3. | Harapanahalli | {48M/13} | 21 MW | 55 MW | 76 MW |
| | **Shimoga District** | | | | |
| 4. | Thuppadahalli | {57C/1} | 15 MW | 32.5 MW | 47.5 MW |
| | **Gadag District** | | | | |
| 5. | Kappadagudda | | | | |
| | **Area-3** | **{48M/11}** | **4 MW** | **5.5 MW** | **9.5 MW** |
| | **Total** | | **64 MW** | **183 MW** | **247 MW** |

4. The terms and conditions as contained in the Government Orders dated 31.5.2002 and 5.3.2003 shall ipso facto continue.

By Order and in the name of the Governor of Karnataka,

P.R. 70

**K.L. JAYARAM**

Under Secretary to Government, Energy Department

## ಶಿಕ್ಷಣ ಸಚಿವಾಲಯ

**ವಿಷಯ:** 2004-2005ನೇ ಶೈಕ್ಷಣಿಕ ಸಾಲಿಗೆ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಎಡ್ ಕೋರ್ಸಿನ ವಿದ್ಯಾರ್ಥಿ ಪ್ರಮಾಣದ ನಿರ್ಧಾರಣೆ.

**ಓದಲಾಗಿದೆ:** (1) ದಿನಾಂಕ: 14-12-2004 ಸಂ. ಇಡಿ 329 ಯುಆರ್‌ಸಿ 2004ರ ಸರ್ಕಾರಿ ಆದೇಶ

(2) ದಿನಾಂಕ: 20-12-2004 ಸಂ. ಇಡಿ 329 ಯುಆರ್‌ಸಿ 2004ರ ಸರ್ಕಾರಿ ಪತ್ರ

(3) ದಿನಾಂಕ: 20-12-2004 ಸಂ. F.SRO/NCTE/2004-05/ 9485ರ ಎನ್‌ಸಿಟಿಇಯ ಪ್ರಾದೇಶಿಕ ನಿರ್ದೇಶಕರ ಪತ್ರ.

**ಪೀಠಿಕೆ:**

೧) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್‌ಸಿಟಿಇ ಅಧಿನಿಯಮ ೧೯೯೩ರ ೧೪ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮದ ೫೩(೧೮)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಟಿಸಿಹೆಚ್ ಮತ್ತು ಬಿಇಡಿ ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, ೧೯೯೯ರ ೨(೧)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ. ಅದರಂತೆ ದಿನಾಂಕ: ೦೬–೦೫–೨೦೦೪ರ ಸರ್ಕಾರಿ ಆದೇಶದಲ್ಲಿ ೨೦೦೩–೨೦೦೪ನೇ ಶೈಕ್ಷಣಿಕ ಸಾಲಿಗೆ ಬಿಇಡಿ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ನಿಗದಿಗೊಳಿಸಲಾಗಿತ್ತು.

೨) ೨೦೦೪–೨೦೦೫ನೇ ಶೈಕ್ಷಣಿಕ ಸಾಲಿನ ಬಿ.ಎಡ್ ಕೋರ್ಸಿನ ಸೀಟ್ ಮ್ಯಾಟ್ರಿಕ್ಸ್‌ನ್ನು ಪ್ರಕಟಿಸಲು ಅನುವಾಗುವಂತೆ ಎನ್‌ಸಿಟಿಇ ಮಾನ್ಯತೆ ಹೊಂದಿದ ಶಿಕ್ಷಣ ಕಾಲೇಜುಗಳ ಪಟ್ಟಿಯನ್ನು ಅನುಮೋದಿತ ವಿದ್ಯಾರ್ಥಿ ಪ್ರಮಾಣದೊಂದಿಗೆ ತಕ್ಷಣ ಒದಗಿಸುವಂತೆ ಎನ್‌ಸಿಟಿಇ–ಎಸ್.ಆರ್.ಸಿಯ ಪ್ರಾದೇಶಿಕ ನಿರ್ದೇಶಕರನ್ನು ಕೋರಲಾಗಿತ್ತು. ಅದಕ್ಕೆ ಪ್ರತಿಕ್ರಿಯಿಸಿ ದಿನಾಂಕ: ೨೦–೧೨–೨೦೦೪ರ ಪತ್ರದಲ್ಲಿ ಎನ್‌ಸಿಟಿಇ–ಎಸ್.ಆರ್.ಸಿಯ ಪ್ರಾದೇಶಿಕ ನಿರ್ದೇಶಕರು ಮಾನ್ಯತೆ ಹೊಂದಿದ ಶಿಕ್ಷಣ ಕಾಲೇಜುಗಳ ಪಟ್ಟಿಯನ್ನು ಅನುಮೋದಿತ ವಿದ್ಯಾರ್ಥಿ ಪ್ರಮಾಣದೊಂದಿಗೆ ಒದಗಿಸಿದ್ದಾರೆ.

೩) ಈ ಹಿನ್ನೆಲೆಯಲ್ಲಿ, ಎನ್‌ಸಿಟಿಇ–ಎಸ್.ಆರ್.ಸಿಯು ವಿದ್ಯಾರ್ಥಿ ಪ್ರಮಾಣದೊಂದಿಗೆ ಒದಗಿಸಿರುವ ಮಾನ್ಯತೆ ಹೊಂದಿದ ಹೊಸ ಶಿಕ್ಷಣ ಕಾಲೇಜುಗಳ ಪಟ್ಟಿಯ ವಿವರಗಳನ್ನಾಧರಿಸಿ ೨೦೦೪–೨೦೦೫ನೇ ಸಾಲಿಗೆ ಶಿಕ್ಷಣ ಕಾಲೇಜುಗಳಲ್ಲಿನ ಬಿಎಡ್ ಕೋರ್ಸಿನ ವಿದ್ಯಾರ್ಥಿ ಪ್ರಮಾಣದ ನಿರ್ಧಾರಣೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 329 ಯುಆರ್‌ಸಿ 2004 ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್ 2004**

೪) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ ೨೦೦೦ದ ೫೩ನೇ ಪ್ರಕರಣದ (೧೮)ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್ ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು ೧೯೯೯ರ ೨(೧)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರಿ/ ವಿಶ್ವವಿದ್ಯಾಲಯ/ಅನುದಾನಿತ ಮತ್ತು ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸುತ್ತಿರುವ ಬಿ.ಎಡ್ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ೨೦೦೪–೨೦೦೫ನೇ ಶೈಕ್ಷಣಿಕ ಸಾಲಿಗೆ ಅನುವಾಗುವಂತೆ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನಿರ್ದಿಷ್ಟಪಡಿಸಲಾಗಿದೆ. ಸದರಿ ಶಿಕ್ಷಣ ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಪ್ರವೇಶವು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತವೆ.

೧. ಕಾಲೇಜುಗಳು ಕೆ.ಎಸ್.ಯು ಅಧಿನಿಯಮ ೨೦೦೦ದ ೫೩(೧೮)ನೇ ಪ್ರಕರಣದಡಿ ಸಂಬಂಧಪಟ್ಟ ವಿಶ್ವವಿದ್ಯಾಲಯಗಳು ಮಂಜೂರು ಮಾಡಿರುವ ಮುಂದುವರಿಕೆ ಸಂಯೋಜನೆಯನ್ನು ಹೊಂದಿರತಕ್ಕದ್ದು.

೨. ವಿದ್ಯಾರ್ಥಿಗಳ ಪ್ರವೇಶವನ್ನು ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿಎಡ್ ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳನ್ವಯ ಕಟ್ಟು–ನಿಟ್ಟಾಗಿ ಪಡೆಯತಕ್ಕದ್ದು.

೩. ಸದರಿ ೧೯೯೯ರ ನಿಯಮಗಳ ನಿಯಮ ೨(೧)ರ ಅಡಿಯಲ್ಲಿ ನಿರ್ಧರಿಸಲಾಗಿರುವ ವಿದ್ಯಾರ್ಥಿ ಪ್ರಮಾಣಕ್ಕೆ ಅನುಗುಣವಾಗಿ ಮತ್ತು ಪೂರಕವಾಗಿ ವಿಧಿಸಲಾಗುವ ಷರತ್ತುಗಳಿಗೊಳಪಟ್ಟು ವಿದ್ಯಾರ್ಥಿಗಳ ಪ್ರವೇಶ ಪಡೆಯತಕ್ಕದ್ದು.

೪. ಕಾಲೇಜುಗಳು ಎನ್‌ಸಿಟಿಇ ಅಧಿನಿಯಮ ೧೯೯೩ರ ೧೪ನೇ ಪ್ರಕರಣದಡಿ ಮಾನ್ಯತೆಯನ್ನು ಹೊಂದಿರತಕ್ಕದ್ದು.

೫. ಕಾಲೇಜುಗಳು ಎನ್‌ಸಿಟಿಇ ಜಾರಿಗೊಳಿಸಿರುವ ನೋಟೀಸ್‌ನಲ್ಲಿ ನಿರ್ದಿಷ್ಟಪಡಿಸಲಾಗಿರುವ ಷರತ್ತುಗಳನ್ನು ಕಟ್ಟು–ನಿಟ್ಟಾಗಿ ಪೂರೈಸತಕ್ಕದ್ದು. ಎನ್‌ಸಿಟಿಇ ಮಾನ್ಯತೆ ಹೊಂದದ ಹೊರತು ಕಾಲೇಜು ವಿದ್ಯಾರ್ಥಿಗಳ ಪ್ರವೇಶ ಪಡೆಯತಕ್ಕದ್ದಲ್ಲ.

೬. ನಿರ್ದಿಷ್ಟ ವಿನಾಯಿತಿ ನೀಡದ ಹೊರತು ಸಂಬಂಧಪಟ್ಟ ವಿಶ್ವವಿದ್ಯಾಲಯ ಮಂಜೂರು ಮಾಡಿರುವ ಮುಂದುವರಿಕೆ ಸಂಯೋಜನೆ ಮತ್ತು ಎನ್‌ಸಿಟಿಇ ಮಂಜೂರು ಮಾಡಿರುವ ಮಾನ್ಯತೆ ರಹಿತವಾಗಿ ವಿದ್ಯಾರ್ಥಿಗಳ ಪ್ರವೇಶ ಪಡೆಯುವುದು ಕರ್ನಾಟಕ ಮಾನ್ಯತೆರಹಿತ ಮತ್ತು ಅಸಂಯೋಜಿತ ಶಿಕ್ಷಣ ಸಂಸ್ಥೆಗಳಿಗೆ ವಿದ್ಯಾರ್ಥಿಗಳ ಪ್ರವೇಶ ನಿಷೇಧ ಅಧಿನಿಯಮ ೧೯೮೨ರ ೩ನೇ ಪ್ರಕರಣದ ಉಲ್ಲಂಘನೆಯಾಗಿದ್ದು ಮೊಕದ್ದಮೆ ಹೂಡಲು ಆಕರ್ಷಿತವಾಗಿರುತ್ತದೆ.

೭. ನಿಗದಿತ ವಿದ್ಯಾರ್ಥಿ ಪ್ರಮಾಣಕ್ಕಿಂತ ಹೆಚ್ಚುವರಿಯಾಗಿ ವಿದ್ಯಾರ್ಥಿಗಳ ಪ್ರವೇಶ ಪಡೆಯುವುದು ಕೆ.ಎಸ್.ಯು ಅಧಿನಿಯಮ ೨೦೦೦ದ ೬೦ನೇ ಪ್ರಕರಣದ ಉಲ್ಲಂಘನೆಯಲ್ಲದೆ ಮೇಲ್ಕಂಡ ೧೯೮೨ರ ಅಧಿನಿಯಮ ೪ನೇ ಪ್ರಕರಣದ ಉಲ್ಲಂಘನೆ ಸಹ ಆಗಿದ್ದು, ಮೊಕದ್ದಮೆ ಹೂಡಲು ಆಕರ್ಷಿತವಾಗುವುದಲ್ಲದೆ ಸಂಯೋಜನೆ ಹಿಂತೆಗೆದುಕೊಳ್ಳಲು ಸಕಾರಣವಾಗುತ್ತದೆ.

೫) ಕೇಂದ್ರೀಕೃತ ಪ್ರವೇಶ ಘಟಕದ ವಿಶೇಷಾಧಿಕಾರಿಯವರು ಈ ಆದೇಶದಲ್ಲಿನ ಅನುಬಂಧದಲ್ಲಿ ನಿರ್ದಿಷ್ಟಪಡಿಸಲಾಗಿರುವ ಎನ್.ಸಿ.ಟಿ.ಇ ಮಾನ್ಯತೆ ಹೊಂದಿದ ಶಿಕ್ಷಣ ಕಾಲೇಜುಗಳಿಗೆ ಮಾತ್ರ ಎನ್‌ಸಿಟಿಇ ಅನುಮೋದಿಸಿರುವ ವಿದ್ಯಾರ್ಥಿ ಪ್ರಮಾಣದ ಮಿತಿಯಲ್ಲಿ ೧೯೯೯ರ ನಿಯಮಗಳ ನಿಯಮ ೨ (ಜೆ)ಯಲ್ಲಿ ನಿಗದಿಪಡಿಸಿರುವ ಪ್ರಮಾಣದಲ್ಲಿ ಅಭ್ಯರ್ಥಿಗಳನ್ನು ವಿತರಣೆ ಮಾಡತಕ್ಕದ್ದು. ಆದರೆ ಸಿಇಸಿಯ ಪ್ರವೇಶ ಪ್ರಕ್ರಿಯೆ ಮುಕ್ತಾಯಗೊಳ್ಳುವ ಮುನ್ನ ಎನ್‌ಸಿಟಿಇ ವಿದ್ಯಾರ್ಥಿ ಪ್ರಮಾಣವನ್ನು ನಿರ್ದಿಷ್ಟಪಡಿಸಿ ಮಾನ್ಯತೆಯನ್ನು ನೀಡಿದಲ್ಲಿ ಕೇಂದ್ರೀಕೃತ ಪ್ರವೇಶ ಘಟಕವು ಅಂತಹ ಕಾಲೇಜುಗಳಿಗೆ ಮಂಜೂರಾದ ವಿದ್ಯಾರ್ಥಿ ಪ್ರಮಾಣದ ಮಿತಿಯಲ್ಲಿ ನಿರ್ದಿಷ್ಟಪಡಿಸಿರುವ ಕೋಟಾ ನಿಯಮವನ್ನು ಅನುಸರಿಸಿ ವಿದ್ಯಾರ್ಥಿಗಳನ್ನು ವಿತರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಂದರ ರಾಜ ಗುಪ್ತ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

ಅನುಬಂಧ

| ಕ್ರ. ಸಂ. | ಕಾಲೇಜುಗಳ ಹೆಸರು | ಎನ್‌ಸಿಟಿಇ ನಿಗದಿಪಡಿಸಿರುವ ಗರಿಷ್ಠ ವಿದ್ಯಾರ್ಥಿ ಪ್ರಮಾಣ | ಷರಾ |
|---|---|---|---|
| ಬೆಂಗಳೂರು ನಗರ ಜಿಲ್ಲೆ | | | |
| 1 | ಎಂ.ಎಸ್. ರಾಮಯ್ಯ ಟೀಚರ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್, ಬೆಂಗಳೂರು | 100 | |
| 2 | ರಾಯಲ್ ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು | 100 | |
| 3 | ಶಿಕ್ಷಸಾಗರ ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು | 100 | |
| 4 | ಕೆ.ಕೆ. ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು | 100 | |
| 5 | ಗ್ಲೋಬಲ್ ಅಕಾಡೆಮಿ ಫಾರ್ ಟೀಚರ್ ಎಜುಕೇಷನ್, ಬೆಂಗಳೂರು | 100 | |
| 6 | ಎಸ್.ವಿ.ಎನ್. ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು | 100 | |
| 7 | ಸೈಂಟ್ ಪಾಲ್ಸ್ ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು | 100 | |
| 8 | ಬೆಂಗಳೂರು ಸಿಟಿ ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು | 100 | |
| 9 | ಕ್ಯಾಪಿಟಲ್ ಟೀಚರ್ ಟ್ರೈನಿಂಗ್ ಕಾಲೇಜು, ಬೆಂಗಳೂರು | 100 | |
| 10 | ಎಸ್.ಸಿ.ಟಿ. ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು | 100 | |
| 11 | ಸೈಂಟ್ ಫ್ರಾನ್ಸಿಸ್ ಬಿ.ಎಡ್ ಕಾಲೇಜು, ಬೆಂಗಳೂರು | 100 | |
| 12 | ಮಿರಾಂಡ ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು | 100 | |
| 13 | ರಾಷ್ಟ್ರೋತ್ಥಾನ ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು | 100 | |
| 14 | ಗಿಯರ್ ಬಿ.ಎಡ್ ಕಾಲೇಜು, ಬೆಂಗಳೂರು | 100 | |
| 15 | ಎಸ್.ಇ.ಎ. ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು | 100 | |
| 16 | ಕೆ.ಕೆ.ಇ.ಸಿ.ಎಸ್. ಬಿ.ಎಡ್ ಕಾಲೇಜು, ಬೆಂಗಳೂರು | 100 | |
| 17 | ಆರ್.ಆರ್. ಬಿ.ಎಡ್ ಕಾಲೇಜು, ಬೆಂಗಳೂರು | 100 | |
| 18 | ಮದರ್ ಥೆರೇಸಾ ಬಿ.ಎಡ್ ಕಾಲೇಜು, ಯಶವಂತಪುರ, ಬೆಂಗಳೂರು | 100 | |
| 19 | ಕಾವೇರಿ ಬಿ.ಎಡ್ ಕಾಲೇಜು, ಬೆಂಗಳೂರು | 100 | |
| 20 | ಶ್ರೀನಿಧಿ ಕಾಲೇಜ್ ಆಫ್ ಎಜುಕೇಷನ್ ಫಾರ್ ವುಮೆನ್, ಹೊಮ್ಮದೇವಂತಳ್ಳಿ, ಬೆಂಗಳೂರು | 100 | |
| 21 | ಯೂನಿಟಿ ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು | 100 | |
| 22 | ಶ್ರೀನಿಧಿ ಕಾಲೇಜ್ ಆಫ್ ಎಜುಕೇಷನ್ ಫಾರ್ ವುಮೆನ್, ಬೆಂಗಳೂರು | 100 | |
| 23 | ಮದರ್ ಥೆರೇಸಾ ಕಾಲೇಜ್ ಆಫ್ ಎಜುಕೇಷನ್, ಕೆ.ಎಸ್.ಎಸ್. ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ ಕ್ಯಾಂಪಸ್, ಹೆಗ್ಗಡೆ ನಗರ, ಬೆಂಗಳೂರು | 100 | |
| 24 | ವಿವೇಕಾನಂದ ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು | 100 | |
| 25 | ಕ್ವಾಲಿಟಿ ಹೆಲ್ತ್ ಕೇರ್ ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು | 100 | |
| 26 | ಮದರ್ ಥೆರೇಸಾ ಕಾಲೇಜ್ ಆಫ್ ಎಜುಕೇಷನ್, ಜಾಲಹಳ್ಳಿ, ಬೆಂಗಳೂರು | 100 | |
| 27 | ಸಿ.ಎಂ.ಆರ್ ಕಾಲೇಜ್ ಆಫ್ ಎಜುಕೇಷನ್, ಕಲ್ಯಾಣ ನಗರ್, ಬೆಂಗಳೂರು | 100 | |
| 28 | ಪಿ.ಇ.ಟಿ. ಕಾಲೇಜ್ ಆಫ್ ಎಜುಕೇಷನ್, ಮೈಸೂರು ರೋಡ್, ಬೆಂಗಳೂರು | 100 | |
| 29 | ಆಚಾರ್ಯ ಕಾಲೇಜ್ ಆಫ್ ಎಜುಕೇಷನ್, ಹೆಸರಘಟ್ಟ ಮೈನ್ ರೋಡ್, ಬೆಂಗಳೂರು | 100 | |
| 30 | ದಿ ಆಕ್ಸ್‌ಫರ್ಡ್ ಕಾಲೇಜ್ ಆಫ್ ಎಜುಕೇಷನ್, ಜೆ.ಪಿ. ನಗರ, ಬೆಂಗಳೂರು | 100 | |
| 31 | ಕಮಲಾ ನೆಹರು ಬಿ.ಎಡ್ ಕಾಲೇಜು, ಬನಶಂಕರಿ ದೇವಸ್ಥಾನದ ಹತ್ತಿರ, ಕನಕಪುರ ರೋಡ್, ಬೆಂಗಳೂರು | 100 | |

| ಕ್ರ. ಸಂ. | ಕಾಲೇಜುಗಳ ಹೆಸರು | ಎನ್‌ಸಿಟಿಇ ನಿಗದಿಪಡಿಸಿರುವ ಗರಿಷ್ಠ ವಿದ್ಯಾರ್ಥಿ ಪ್ರಮಾಣ | ಷರಾ |
|---|---|---|---|
| 32 | ಅಮಿತ ಬಿ.ಎಡ್ ಕಾಲೇಜು, ವೆಸ್ಟ್ ಆಫ್ ಕಾರ್ಡ್ ರೋಡ್, ಮಹಾಲಕ್ಷ್ಮಿಪುರಂ, ಬೆಂಗಳೂರು | 100 | |
| 33 | ಜೆ.ಎಸ್.ಎಸ್. ಇನ್‌ಸ್ಟಿಟ್ಯೂಟ್ ಆಫ್ ಎಜುಕೇಷನ್, ಜಯನಗರ, ಬೆಂಗಳೂರು | 100 | |
| 34 | ಕರ್ನಾಟಕ ಕಾಲೇಜ್ ಆಫ್ ಎಜುಕೇಷನ್, ಜೀವನ ಭೀಮಾ ನಗರ, ಬೆಂಗಳೂರು | 100 | |
| 35 | ಕರ್ನಾಟಕ ಕಾಲೇಜ್ ಆಫ್ ಎಜುಕೇಷನ್, ತಿರುಮೇನಹಳ್ಳಿ, ಬೆಂಗಳೂರು | 100 | |
| 36 | ನೇತಾಜಿ ಕಾಲೇಜ್ ಆಫ್ ಎಜುಕೇಷನ್, ಅರೆಹಳ್ಳಿ, ಬನಶಂಕರಿ ೩ನೇ ಹಂತ, ಬೆಂಗಳೂರು | 100 | |
| 37 | ಎಂ.ಎಸ್. ರಾಮಯ್ಯ ಕಾಲೇಜ್ ಆಫ್ ಎಜುಕೇಷನ್, ಎಂ.ಎಸ್. ರಾಮಯ್ಯ ನಗರ, ಬೆಂಗಳೂರು | 100 | |
| 38 | ಡಯಾನ ಕಾಲೇಜ್ ಆಫ್ ಎಜುಕೇಷನ್, ಜಕ್ಕೂರು ಪೋಸ್ಟ್, ಯಲಹಂಕ ಹೋಬಳಿ , ಬೆಂಗಳೂರು | 100 | |
| 39 | ಸಿ.ಎಂ.ಎ. ಬಿ.ಎಡ್ ಕಾಲೇಜು, ಕಬ್ಬನ್ ಪೇಟೆ, ಬೆಂಗಳೂರು | 100 | |
| 40 | ಹುಲಿಯಪ್ಪ ಮಾಳಮ್ಮ ಬಿ.ಎಡ್ ಕಾಲೇಜು, ಆನಂದ ನಗರ, ಬೆಂಗಳೂರು | 100 | |
| 41 | ಸಂಪೂರ್ಣ ಮೌಂಟ್ ಫೋರ್ಟ್ ಬಿ.ಎಡ್ ಕಾಲೇಜು, ಹಳೇ ಮದ್ರಾಸ್ ರಸ್ತೆ, ಇಂದಿರಾ ನಗರ, ಬೆಂಗಳೂರು | 100 | |
| 42 | ಯೂನಿಟಿ ಕಾಲೇಜ್ ಆಫ್ ಎಜುಕೇಷನ್, ಮಾರತ್‌ಹಳ್ಳಿ, ಬೆಂಗಳೂರು | 100 | |
| 43 | ಶುಶೃತಿ ಬಿ.ಎಡ್ ಕಾಲೇಜು, ಪೀಣ್ಯ ೨ನೇ ಹಂತ, ಬೆಂಗಳೂರು | 100 | |
| 44 | ವಿಜಯನಗರ ಕಾಲೇಜ್ ಆಫ್ ಎಜುಕೇಷನ್, ವಿಜಯನಗರ, ಬೆಂಗಳೂರು | 100 | |
| 45 | ವೆಂಕಟ್ ಇಂಟರ್ ನ್ಯಾಷನಲ್ ಕಾಲೇಜ್ ಆಫ್ ಎಜುಕೇಷನ್, ರಾಜಾಜಿನಗರ, ಬೆಂಗಳೂರು | 100 | |
| 46 | ಕೆ.ಎಲ್.ಇ. ಸೊಸೈಟೀಸ್ ಕಾಲೇಜ್ ಆಫ್ ಎಜುಕೇಷನ್, ರಾಜಾಜಿನಗರ, ಬೆಂಗಳೂರು | 100 | |
| 47 | ಸಿ.ಎನ್.ಕೆ. ರೆಡ್ಡಿ ಕಾಲೇಜ್ ಆಫ್ ಎಜುಕೇಷನ್, ಚೋಳನಾಯಕನಹಳ್ಳಿ, ಬೆಂಗಳೂರು | 100 | |
| 48 | ಫ್ರಾಂಕ್ ಕಾಲೇಜ್ ಆಫ್ ಎಜುಕೇಷನ್, ಜೆ.ಪಿ. ನಗರ, ಬೆಂಗಳೂರು | 100 | |
| 49 | ರೇವಾ ಇನ್‌ಸ್ಟಿಟ್ಯೂಟ್ ಆಫ್ ಎಜುಕೇಷನ್, ಗಂಗಾನಗರ್, ಬೆಂಗಳೂರು | 100 | |
| 50 | ಸಿದ್ದಾರ್ಥ ಕಾಲೇಜ್ ಆಫ್ ಎಜುಕೇಷನ್, ಆರ್.ಟಿ. ನಗರ್, ಬೆಂಗಳೂರು | 100 | |
| 51 | ರಾಜೀವ್‌ಗಾಂಧಿ ಕಾಲೇಜ್ ಆಫ್ ಎಜುಕೇಷನ್, ನ್ಯಾಷನಲ್ ಪಾರ್ಕ್ ರಸ್ತೆ, ಬೆಂಗಳೂರು. | 100 | |
| 52 | ಶಾರದಮ್ಮ ಸೆಂಟರ್ ಫಾರ್ ಲರ್ನಿಂಗ್, ಆವಲಹಳ್ಳಿ, ಅಂಜನಾಪುರ ಪೋಸ್ಟ್, ಬೆಂಗಳೂರು. | 100 | |

| ಕ್ರ. ಸಂ. | ಕಾಲೇಜುಗಳ ಹೆಸರು | ಎನ್‌ಸಿಟಿಇ ನಿಗದಿಪಡಿಸಿರುವ ಗರಿಷ್ಠ ವಿದ್ಯಾರ್ಥಿ ಪ್ರಮಾಣ | ಷರಾ |
|---|---|---|---|
| 53 | ಬೆಂಗಳೂರು ಕಾಲೇಜ್ ಆಫ್ ಎಜುಕೇಷನ್,<br>ಹೀಳಲಿಗೆ ವಿಲೇಜ್, ಚಂದಾಪುರ, ಬೆಂಗಳೂರು. | 100 | |
| 54 | ಪಿ.ಇ.ಎಸ್. ಕಾಲೇಜ್ ಆಫ್ ಎಜುಕೇಷನ್,<br>ಹೊಸಕೆರೆ ಹಳ್ಳಿ, ಬೆಂಗಳೂರು. | 100 | |
| 55 | ಅನುಪಮ ಕಾಲೇಜ್ ಆಫ್ ಎಜುಕೇಷನ್,<br>ವೆಸ್ಟ್ ಆಫ್ ಕಾರ್ಡ್ ರೋಡ್, ಮಹಾಲಕ್ಷ್ಮಿ ಪುರಂ, ಬೆಂಗಳೂರು. | 100 | |
| | ಬೆಂಗಳೂರು ಗ್ರಾಮಾಂತರ ಜಿಲ್ಲೆ | | |
| 56 | ಶ್ರೀ ಶಾರದಾ ಬಿ.ಎಡ್. ಕಾಲೇಜು,<br>ಬಿ.ಎಂ. ರೋಡ್, ರಾಮನಗರಂ. | 100 | |
| 57 | ನಳಂದ ಕಾಲೇಜ್ ಆಫ್ ಎಜುಕೇಷನ್, ದೇವನಹಳ್ಳಿ | 100 | |
| 58 | ಶ್ರೀ ಕೃಷ್ಣ ಕಾಲೇಜ್ ಆಫ್ ಎಜುಕೇಷನ್, ಬೈಚಾಪುರ ರೋಡ್,<br>ದೇವನಹಳ್ಳಿ ತಾಲ್ಲೂಕು | 100 | |
| 59 | ಎಂ.ಹೆಚ್. ಬಿ.ಎಡ್ ಕಾಲೇಜು,<br>ಬಿ.ಎಂ. ರೋಡ್, ರಾಮನಗರ | 100 | |
| 60 | ಶ್ರೀ ನಿರ್ವಾಣಸ್ವಾಮಿ ಕಾಲೇಜ್ ಆಫ್ ಎಜುಕೇಷನ್, ಕನಕಪುರ | 100 | |
| 61 | ಲಾವಣ್ಯ ಕಾಲೇಜ್ ಆಫ್ ಎಜುಕೇಷನ್, ದೊಡ್ಡಬಳ್ಳಾಪುರ | 100 | |

| | | | |
|---|---|---|---|
| | ಬೆಳಗಾಂ ಜಿಲ್ಲೆ | | |
| 62 | ಶ್ರೀ ಸಿದ್ಧಿ ವಿನಾಯಕ ರೂರಲ್ ಕಾಲೇಜ್ ಆಫ್ ಎಜುಕೇಷನ್,<br>ಹಾರೂಗೇರಿ | 100 | |
| 63 | ವಿ.ಎಸ್.ಎಂ. ಕಾಲೇಜ್ ಆಫ್ ಎಜುಕೇಷನ್, ನಿಪ್ಪಾಣಿ | 100 | |
| 64 | ಭರತೇಶ್ ಕಾಲೇಜ್ ಆಫ್ ಎಜುಕೇಷನ್, ಬೆಲ್ಲದ ಬಾಗೆವಾಡಿ,<br>ಹುಕ್ಕೇರಿ ತಾಲ್ಲೂಕು | 100 | |
| 65 | ವಿದ್ಯಾ ಪ್ರಸಾರಕ್ ಸಮಿತಿ,<br>ರಾಮ್‌ದುರ್ಗ | 100 | |
| 66 | ದಿ ಚಿಕ್ಕೋಡಿ ತಾಲ್ಲೂಕ್ ಎಜುಕೇಷನ್ ಸೊಸೈಟೀಸ್ ಕಾಲೇಜ್ ಆಫ್<br>ಎಜುಕೇಷನ್, ಚಿಕ್ಕೋಡಿ | 100 | |
| 67 | ಆಚಾರ್ಯ ದೇಶ್‌ಭೂಷಣ್ ಕಾಲೇಜ್ ಆಫ್ ಎಜುಕೇಷನ್, ಚಿಕ್ಕೋಡಿ | 100 | |
| 68 | ಸಿ.ಎಲ್.ಇ. ಸೊಸೈಟೀಸ್ ಕಾಲೇಜ್ ಆಫ್ ಎಜುಕೇಷನ್, ಚಿಕ್ಕೋಡಿ | 100 | |
| 69 | ಜೆ.ಎಸ್.ಪಿ. ಸಂಘ ಕಾಲೇಜ್ ಆಫ್ ಎಜುಕೇಷನ್, ಸವದತ್ತಿ ತಾಲ್ಲೂಕು | 100 | |
| 70 | ಕೆ.ಎಲ್.ಇ. ಸೊಸೈಟೀಸ್ ಕಾಲೇಜ್ ಆಫ್ ಎಜುಕೇಷನ್,<br>ಲಿಂಗರಾಜ್ ಕಾಲೇಜ್ ಕ್ಯಾಂಪಸ್, ಕಾಲೇಜ್ ರೋಡ್, ಬೆಳಗಾಂ | 100 | |
| 71 | ಎಸ್.ಎಸ್.ಇ.ಟೀಸ್ ಮಹಿಳಾ ಶಿಕ್ಷ ಮಹಾ ವಿದ್ಯಾಲಯ,<br>ಶಿವಬಸವ ನಗರ, ಬೆಳಗಾಂ | 100 | |
| 72 | ಸಾಗರ ಬಿ.ಎಡ್ ಕಾಲೇಜು,<br>ಎಂ.ಎಂ. ಎಕ್ಸ್‌ಟೆನ್ಷನ್ | 100 | |
| 73 | ಕೆ.ಎಲ್.ಇ. ಸೊಸೈಟೀಸ್ ಕಾಲೇಜ್ ಆಫ್ ಎಜುಕೇಷನ್, ನಿಪ್ಪಾಣಿ | 100 | |
| 74 | ಲಕ್ಷ್ಮಣ್‌ರಾವ್ ಜಾರಕೀಹೋಳಿ ಕಾಲೇಜ್ ಆಫ್ ಎಜುಕೇಷನ್,<br>ವಿದ್ಯಾ ನಗರ್, ಗೋಕಾಕ್ ತಾಲ್ಲೂಕು | 100 | |
| | ಬಳ್ಳಾರಿ ಜಿಲ್ಲೆ | | |
| 75 | ಜ್ಞಾನ ಭಾರತಿ ಕಾಲೇಜ್ ಆಫ್ ಎಜುಕೇಷನ್, ಕೂಡ್ಲಿಗಿ | 100 | |

| ಕ್ರ. ಸಂ. | ಕಾಲೇಜುಗಳ ಹೆಸರು | ಎನ್‌ಸಿಟಿಇ ನಿಗದಿಪಡಿಸಿರುವ ಗರಿಷ್ಠ ವಿದ್ಯಾರ್ಥಿ ಪ್ರಮಾಣ | ಷರಾ |
|---|---|---|---|
| 76 | ವಿ.ವಿ. ಸಂಘ ಕಾಲೇಜ್ ಆಫ್ ಎಜುಕೇಷನ್, ಹೊಸಪೇಟೆ ತಾಲ್ಲೂಕು, ಹೊಸಪೇಟೆ | 100 | |
| 77 | ಜೆ.ಎಸ್.ಎಸ್. ಇನ್‌ಸ್ಟಿಟ್ಯೂಟ್ ಆಫ್ ಎಜುಕೇಷನ್, ಹೂವಿನಹಡಗಲಿ | 100 | |
| | **ಬೀದರ್ ಜಿಲ್ಲೆ** | | |
| 78 | ಕರ್ನಾಟಕ ಕಾಲೇಜ್ ಆಫ್ ಎಜುಕೇಷನ್, ಹೈದರಾಬಾದ್ ರೋಡ್, ಬೀದರ್ | 100 | |
| 79 | ಇಂಡಿಯನ್ ಕಾಲೇಜ್ ಆಫ್ ಎಜುಕೇಷನ್, ಚಿದ್ರಿ | 100 | |
| 80 | ಹಾಲಪ್ಪ ಕೋಟೆ ಬಿ.ಎಡ್ ಕಾಲೇಜು, ಮೈಲೂರ್ ರೋಡ್, ನಿಯರ್ ಲಿಡ್‌ಕರ್ ಆಫೀಸ್ | 100 | |
| 81 | ಬೀದರ್ ವಿದ್ಯಾ ಕೇಂದ್ರ ಕಾಲೇಜ್, ಚಿದ್ರಿ | 100 | |
| 82 | ಗುರು ನಾನಕ್ ಕಾಲೇಜ್ ಆಫ್ ಎಜುಕೇಷನ್, ನಿಯರ್ ನೆಹರು ಸ್ಟೇಡಿಯಂ, ಬೀದರ್ | 100 | |
| 83 | ಅಂಜನಾದೇವಿ ಬಿ.ಎಡ್ ಕಾಲೇಜು, ಹುಮ್ನಾಬಾದ್ | 100 | |
| 84 | ದೊಡ್ಡಪ್ಪ ಅಪ್ಪ ಕಾಲೇಜ್ ಆಫ್ ಎಜುಕೇಷನ್, ಬಸವಕಲ್ಯಾಣ | 100 | |
| 85 | ಹೆಚ್.ಕೆ.ಡಿ.ಇ. ಟ್ರಸ್ಟ್ಸ್ ಕಾಲೇಜ್ ಆಫ್ ಎಜುಕೇಷನ್, ಹುಮ್ನಾಬಾದ್ | 100 | |
| 86 | ಸಿ.ಎಂ.ಎಂ. ಬಿ.ಎಡ್ ಕಾಲೇಜ್, ಬಸವಕಲ್ಯಾಣ | 100 | |
| | **ಬಿಜಾಪುರ ಜಿಲ್ಲೆ** | | |
| 87 | ಶ್ರೀ ಫಲ್ಸಿಂಗ್ ನಾರಾಯಣ್ ಚವ್ಹಾಣ್ ಮೆಮೋರಿಯಲ್ ಕಾಲೇಜ್ ಆಫ್ ಎಜುಕೇಷನ್, ಸಿಂಧಗಿ ತಾಲ್ಲೂಕು | 100 | |
| 88 | ಎಸ್.ಎಂ.ಆರ್.ಕೆ. ಮಹಿಳಾ ವಿದ್ಯಾ ವರ್ಧಕ ಸಂಘ ಕಾಲೇಜ್ ಆಫ್ ಎಜುಕೇಷನ್, ಇಂಡಿ ರೋಡ್, ಬಿಜಾಪುರ | 100 | |
| 89 | ಶ್ರೀ ವೀರೇಶ್ವರ ವಿ.ವಿ. ಸಂಘ ಕಾಲೇಜ್ ಆಫ್ ಎಜುಕೇಷನ್, ಮುದ್ದೆಬಿಹಾಳ್ ತಾಲ್ಲೂಕು | 100 | |
| 90 | ಜೆ.ಹೆಚ್. ಪಟೇಲ್ ಕಾಲೇಜ್ ಆಫ್ ಎಜುಕೇಷನ್, ಸಿಂಧಗಿ | 100 | |
| | **ಚಾಮರಾಜ ನಗರ ಜಿಲ್ಲೆ** | | |
| 91 | ನಿಸರ್ಗ ಇನ್‌ಸ್ಟಿಟ್ಯೂಟ್ ಆಫ್ ಎಜುಕೇಷನ್, ಕೊಳ್ಳೇಗಾಲ | 100 | |
| 92 | ಜೆ.ಎಸ್.ಎಸ್. ಇನ್‌ಸ್ಟಿಟ್ಯೂಟ್ ಆಫ್ ಎಜುಕೇಷನ್, ಚಾಮರಾಜನಗರ | 100 | |
| | **ಚಿಕ್ಕಮಗಳೂರು ಜಿಲ್ಲೆ** | | |
| 93 | ಜ್ಞಾನ ಭಾರತಿ ಬಿ.ಎಡ್ ಕಾಲೇಜು, ಕಡೂರು | 100 | |
| | **ಚಿತ್ರದುರ್ಗ ಜಿಲ್ಲೆ** | | |
| 94 | ಪಿ.ವಿ.ಎಸ್. ಕಾಲೇಜ್ ಆಫ್ ಎಜುಕೇಷನ್, ಜೋಗಿಮಠ್ ರೋಡ್, ಚಿತ್ರದುರ್ಗ | 100 | |
| 95 | ಎನ್.ಜಯಣ್ಣ ಕಾಲೇಜ್ ಆಫ್ ಎಜುಕೇಷನ್, ಎ.ಜಿ. ರೋಡ್, ಚಳ್ಳಕೆರೆ | 100 | |
| 96 | ಬಾಪೂಜಿ ಕಾಲೇಜ್ ಆಫ್ ಎಜುಕೇಷನ್, ಪಿಲ್ಲೆಕೇರೇನಹಳ್ಳಿ, ಚಿತ್ರದುರ್ಗ | 100 | |
| 97 | ಸೈಂಟ್ ಮೇರೀಸ್ ಶಿಕ್ಷಣ ಮಹಾವಿದ್ಯಾಲಯ, ಕೆ.ಬಿ. ಎಕ್ಸ್‌ಟೆನ್ಷನ್, ಚಿತ್ರದುರ್ಗ | 100 | |
| 98 | ಅನಂತ ಸೇವಾಶ್ರಮ ಶ್ರಮಣ, ವಿಶ್ವಾಸ್ಥ ಸಮಿತಿ, ಮಲ್ಲಾಡಿಹಳ್ಳಿ, ಹೊಳ್ಕೆರೆ ತಾಲ್ಲೂಕು | 100 | |

| ಕ್ರ. ಸಂ. | ಕಾಲೇಜುಗಳ ಹೆಸರು | ಎನ್‌ಸಿಟಿಇ ನಿಗದಿಪಡಿಸಿರುವ ಗರಿಷ್ಠ ವಿದ್ಯಾರ್ಥಿ ಪ್ರಮಾಣ | ಷರಾ |
|---|---|---|---|
| | **ದಕ್ಷಿಣ ಕನ್ನಡ ಜಿಲ್ಲೆ** | | |
| 99 | ಮಾರ್ ಇವ್ರೋನೀಸ್ ಕಾಲೇಜ್ ಆಫ್ ಎಜುಕೇಷನ್, ಕಂತೂರ ಪೆರಬೇ, ಪುತ್ತೂರು | 100 | |
| 100 | ವಿವೇಕಾನಂದ ಕಾಲೇಜ್ ಆಫ್ ಎಜುಕೇಷನ್, ತೆಂಕಿಲಾ, ಪುತ್ತೂರು | 100 | |
| 101 | ಕರಾವಳಿ ಕಾಲೇಜ್ ಆಫ್ ಎಜುಕೇಷನ್,ಕೊತಾರಿ ಚೌಕಿ, ಮಂಗಳೂರು | 100 | |
| 102 | ಪ್ರಸನ್ನ ಕಾಲೇಜ್ ಆಫ್ ಎಜುಕೇಷನ್, ಬೆಳ್ತಂಗಡಿ ತಾಲ್ಲೂಕು, ಉಜಿರೆ | 100 | |
| | **ದಾವಣಗೆರೆ ಜಿಲ್ಲೆ** | | |
| 103 | ಎಸ್.ಎಂ. ಕೃಷ್ಣ ಕಾಲೇಜ್ ಆಫ್ ಎಜುಕೇಷನ್, ಕೈಲಾಸ್ ರೋಡ್, ಗಾಂಧಿನಗರ್, ದಾವಣಗೆರೆ | 100 | |
| 104 | ಶ್ರೀ ನಂದೀಶ್ವರ ಗ್ರಾಮಾಂತರ ಬಿ.ಎಡ್ ಕಾಲೇಜು, ನಂದಿಗುಡಿ, ಹರಿಹರ ತಾಲ್ಲೂಕು | 100 | |
| 105 | ನೂತನ ಕಾಲೇಜ್ ಆಫ್ ಎಜುಕೇಷನ್, ಬಿ.ಐ.ಇ.ಟಿ. ರೋಡ್, ದಾವಣಗೆರೆ | 100 | |
| 106 | ಶ್ರೀಪಾರ್ಶ್ವನಾಥ ಕಾಲೇಜ್ ಆಫ್ ಎಜುಕೇಷನ್ ಫಾರ್ ವುಮೆನ್, ಚನ್ನಗಿರಿ | 100 | |
| 107 | ಶ್ರೀಮತಿ ಸರ್ವಮಂಗಳಮ್ಮ ಮಾಗನೂರ್ ಬಸಪ್ಪ ಕಾಲೇಜ್ ಆಫ್ ಎಜುಕೇಷನ್ ಫಾರ್ ವುಮೆನ್, ತರಳಬಾಳು ಬಡಾವಣೆ, ದಾವಣಗೆರೆ | 100 | |
| 108 | ಎಸ್.ಜೆ.ವಿ.ಪಿ. ಬಿ.ಎಡ್ ಕಾಲೇಜು, ಹೊನ್ನಳ್ಳಿ | 100 | |
| 109 | ಶ್ರೀ ಮಂಜರಿ ಹನುಮಂತಪ್ಪ ಕಾಲೇಜ್ ಆಫ್ ಎಜುಕೇಷನ್, ಬಿ.ಪಿ. ರೋಡ್, ದಾವಣಗೆರೆ | 100 | |
| 110 | ಸಿದ್ದಾರ್ಥ ಬಿ.ಎಡ್ ಕಾಲೇಜು, ಜಗಳೂರು | 100 | |
| | **ಧಾರವಾಡ ಜಿಲ್ಲೆ** | | |
| 111 | ಸಿದ್ದಾರೂಢ ಬಿ.ಎಡ್ ಕಾಲೇಜು, ಸವದತ್ತಿ ರೋಡ್, ಧಾರವಾಡ | 100 | |
| 112 | ಅಂಜುಮನ್ ಸೆಂಟೆನರಿ ಬಿ.ಎಡ್ ಕಾಲೇಜು, ಹುಬ್ಬಳ್ಳಿ | 100 | |
| | **ಗದಗ್ ಜಿಲ್ಲೆ** | | |
| 113 | ರಾಜೀವ್‌ಗಾಂಧಿ ಎಜುಕೇಷನ್ ಬಿ.ಎಡ್ ಕಾಲೇಜು, ರೋಣ್ ಪೋಸ್ಟ್, ರೋಣ | 100 | |
| 114 | ಬಸವೇಶ್ವರ ಕಾಲೇಜ್ ಆಫ್ ಎಜುಕೇಷನ್, ತೋಂಟದಾರ್ಯ ವಿದ್ಯಾ ಪೀಠ, ಗದಗ | 100 | |
| 115 | ಡಿ.ಸಿ. ಪಾವಟೆ ಕಾಲೇಜ್ ಆಫ್ ಎಜುಕೇಷನ್, ಗದಗ್ | 100 | |
| 116 | ಶ್ರೀಮತಿ ಮನೋರಮ್‌ಬಾಳ್ ಭೀಮ್‌ರಾವ್ ಹುಯಿಲ್‌ಗೋಳ್ ಕಾಲೇಜ್ ಆಫ್ ಎಜುಕೇಷನ್, ಕೆ.ಕ್ರಾನಿ ರೋಡ್, ಗದಗ | 100 | |
| 117 | ಪಿ.ಪಿ.ಜಿ. ಕಾಲೇಜ್ ಆಫ್ ಎಜುಕೇಷನ್, ಗದಗ್ | 100 | |
| | **ಗುಲ್ಬರ್ಗಾ ಜಿಲ್ಲೆ** | | |
| 118 | ಡೆಕ್ಕನ್ ಬಿ.ಎಡ್. ಕಾಲೇಜು, ನೂರಾಣಿ ಮೊಹಲ್ಲಾ, ಗುಲ್ಬರ್ಗಾ | 100 | |
| 119 | ನ್ಯಾಷನಲ್ ಕಾಲೇಜ್ ಆಫ್ ಎಜುಕೇಷನ್, ದರ್ಗಾ ರೋಡ್, ಗುಲ್ಬರ್ಗಾ | 100 | |
| 120 | ಎಸ್.ಬಿ. ಪಾಟೀಲ್ ಬಿ.ಎಡ್ ಕಾಲೇಜು, ಯೂನಿವರ್ಸಿಟಿ ರೋಡ್, ಗುಲ್ಬರ್ಗಾ | 100 | |
| 121 | ಕೆ.ಸಿ.ಟಿ. ಬಿ.ಎಡ್ ಕಾಲೇಜು, ಇಸ್ಲಾಂ ಕಾಲೋನಿ, ಗುಲ್ಬರ್ಗಾ | 100 | |

| ಕ್ರ. ಸಂ. | ಕಾಲೇಜುಗಳ ಹೆಸರು | ಎನ್‌ಸಿಟಿಇ ನಿಗದಿಪಡಿಸಿರುವ ಗರಿಷ್ಠ ವಿದ್ಯಾರ್ಥಿ ಪ್ರಮಾಣ | ಷರಾ |
|---|---|---|---|
| 122 | ಶ್ರೀ ಮುರುಗರಾಜೇಂದ್ರ ಸ್ವಾಮೀಜಿ ಬಿ.ಎಡ್ ಕಾಲೇಜು, ಕುಸ್ನೂರು ರೋಡ್, ಗುಲ್ಬರ್ಗಾ | 100 | |
| 123 | ಶ್ರೀಮಾನ್ ಧರ್ಮಸಿಂಗ್ ಬಿ.ಎಡ್ ಕಾಲೇಜು, ಓಲ್ಡ್ ಜೇವರ್ಗಿ ರೋಡ್, ಗುಲ್ಬರ್ಗಾ | 100 | |
| 124 | ನೂತನ್ ವಿದ್ಯಾಲಯ ಸೊಸೈಟೀಸ್ ಕಾಲೇಜ್ ಆಫ್ ಎಜುಕೇಷನ್, ಬ್ರಹ್ಮಪುರ, ಗುಲ್ಬರ್ಗಾ | 100 | |
| 125 | ಅಲ್-ಬದಾರ್ ಕಾಲೇಜ್ ಆಫ್ ಎಜುಕೇಷನ್, ಎಂ.ಎಸ್.ಕೆ. ಮಿಲ್ ರೋಡ್, ಗುಲ್ಬರ್ಗಾ | 100 | |
| | **ಹಾಸನ ಜಿಲ್ಲೆ** | | |
| 126 | ಅನಂತ ಸದ್ವೈದ್ಯ ಕಾಲೇಜ್ ಆಫ್ ಎಜುಕೇಷನ್, ಅರಸೀಕೆರೆ | 100 | |
| 127 | ಶ್ರೀ ವರಮಹಾಲಕ್ಷ್ಮಿ ಕಾಲೇಜ್ ಆಫ್ ಎಜುಕೇಷನ್, ಲಕ್ಷ್ಮೀಪುರಂ ಎಕ್ಸ್‌ಟೆನ್ಷನ್, ಹಾಸನ | 100 | |
| 128 | ಎನ್.ಡಿ.ಆರ್.ಕೆ. ಕಾಲೇಜ್ ಆಫ್ ಎಜುಕೇಷನ್, ಬಿ.ಎಂ. ರೋಡ್, ಹಾಸನ | 100 | |
| 129 | ರಾಜೀವ್‌ಗಾಂಧಿ ಕಾಲೇಜ್ ಆಫ್ ಎಜುಕೇಷನ್, ಬಿ.ಎಂ. ರೋಡ್, ಹಾಸನ್ | 100 | |
| | **ಹಾವೇರಿ ಜಿಲ್ಲೆ** | | |
| 130 | ಬಸವೇಶ್ವರ ಬಿ.ಎಡ್ ಕಾಲೇಜ್ ಎಸ್.ಜೆ.ಎಂ. ವಿದ್ಯಾಪೀಠ, ನಿಯರ್ ಹೊಸಮಠ್, ಹಾವೇರಿ | 100 | |
| 131 | ಆರ್.ಟಿ.ಇ. ಸೊಸೈಟೀಸ್ ಕಾಲೇಜ್ ಆಫ್ ಎಜುಕೇಷನ್, ರಾಣಿಬೆನ್ನೂರು | 100 | |
| 132 | ಶ್ರೀ ತರಳಬಾಳು ಜಗದ್ಗುರು ಕಾಲೇಜ್ ಆಫ್ ಎಜುಕೇಷನ್, ಹಿರೇಕೆರೂರು, ಹಾವೇರಿ ಜಿಲ್ಲೆ | 100 | |
| | **ಕೋಲಾರ ಜಿಲ್ಲೆ** | | |
| 133 | ಶ್ರೀ ವಿಜಯೇಂದ್ರ ಬಿ.ಎಡ್ ಕಾಲೇಜ್ ಕೆ.ಜಿ.ಎಫ್, ಕೋಲಾರ ಜಿಲ್ಲೆ | 100 | |
| 134 | ಎ.ಇ.ಅಂಡ್ ಸಿ.ಎಸ್. ರಾಮಪ್ರಿಯಾ ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು ಚೆನ್ನೈ, ಬೈ ಪಾಸ್ ರೋಡ್, ಮುಳಬಾಗಿಲು. | 100 | |
| 135 | ರವಿ ಕಾಲೇಜ್ ಆಫ್ ಎಜುಕೇಷನ್, ಗೌರಿ ಪೇಟೆ, ಕೋಲಾರ ಜಿಲ್ಲೆ. | 100 | |
| 136 | ರಾಕ್ ವ್ಯಾಲಿ ಟೀಚರ್ಸ್ ಕಾಲೇಜು, ನಿಯರ್ ಕಮಲಾ ನೆಹರು ಹಾಸ್ಪಿಟಲ್, ಬಂಗಾರಪೇಟೆ | 100 | |
| 137 | ಸುಗುಣ ಬಿ.ಎಡ್ ಕಾಲೇಜು, ತಮಕಾ, ಕೋಲಾರ ಜಿಲ್ಲೆ | 100 | |
| 138 | ವಿಕ್ರಮ್ ಬಿ.ಎಡ್. ಕಾಲೇಜು, ಚಿಂತಾಮಣಿ,ಕೋಲಾರ ಜಿಲ್ಲೆ | 100 | |
| 139 | ಅರಿಸ್ಟಾಟಲ್ ಕಾಲೇಜ್ ಆಫ್ ಎಜುಕೇಷನ್, ಅಂಡರ್‌ಸನ್ ಪೇಟೆ, ಕೆ.ಜಿ.ಎಫ್ | 100 | |
| 140 | ಶ್ರೀಮತಿ ಇಂಧಿರಾ ಬಿ.ಎಡ್ ಕಾಲೇಜು, ಬೂದಿಕೊಡೆ ಕೋಲಾರ ಜಿಲ್ಲೆ | 100 | |
| 141 | ಹೇಮಾದ್ರಿ ಬಿ.ಎಡ್ ಕಾಲೇಜು, ಮುರಂದಹಳ್ಳಿ ಕ್ರಾಸ್, ಶ್ರೀನಿವಾಸಪುರ ರೋಡ್, ಕೋಲಾರ | 100 | |
| 142 | ಶ್ರೀ ಶೃಂಗೇರಿ ಕಾಲೇಜ್ ಆಫ್ ಎಜುಕೇಷನ್, ನಂದಿ, ಚಿಕ್ಕಬಳ್ಳಾಪುರ ತಾಲ್ಲೂಕು | 100 | |

| ಕ್ರ. ಸಂ. | ಕಾಲೇಜುಗಳ ಹೆಸರು | ಎನ್‌ಸಿಟಿಇ ನಿಗದಿಪಡಿಸಿರುವ ಗರಿಷ್ಠ ವಿದ್ಯಾರ್ಥಿ ಪ್ರಮಾಣ | ಷರಾ |
|---|---|---|---|
| | **ಕೊಪ್ಪಳ ಜಿಲ್ಲೆ** | | |
| 143 | ವಿನೂತನ ಶಿಕ್ಷಣ ಸೇವಾ ಸಂಸ್ಥೆ ರೂರಲ್ ಕಾಲೇಜ್ ಆಫ್ ಎಜುಕೇಷನ್, ಕೊಪ್ಪಳ ಜಿಲ್ಲೆ, ಕೊಪ್ಪಳ | 100 | |
| 144 | ಶ್ರೀ ಗವಿ ಸಿದ್ದೇಶ್ವರ ಕಾಲೇಜ್ ಆಫ್ ಎಜುಕೇಷನ್, ಸಂಸ್ಥಾನ ಶ್ರೀ ಗವಿಮಠ್, ಕೊಪ್ಪಳ | 100 | |
| | **ಮಂಡ್ಯ ಜಿಲ್ಲೆ** | | |
| 145 | ವಿಜಯಾ ಟೀಚರ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್ ಪಾಂಡವಪುರ | 100 | |
| 146 | ಎಸ್.ಎಂ. ಲಿಂಗಪ್ಪ ಕಾಲೇಜ್ ಆಫ್ ಎಜುಕೇಷನ್, ಕೃಷ್ಣರಾಜಪೇಟೆ | 100 | |
| 147 | ವಿ.ಎಂ. ಲಿಂಗಯ್ಯ ಕಾಲೇಜ್ ಆಫ್ ಎಜುಕೇಷನ್, ಸೋಮನಹಳ್ಳಿ, ಮದ್ದೂರು ತಾಲ್ಲೂಕು | 100 | |
| 148 | ಎ.ಇ.ಟಿ. ಕಾಲೇಜ್ ಆಫ್ ಎಜುಕೇಷನ್, ಸ್ವರ್ಣಸಂದ್ರ, ಎಂ.ಸಿ. ರೋಡ್, ಮಂಡ್ಯ | 100 | |
| | **ಮೈಸೂರು ಜಿಲ್ಲೆ** | | |
| 149 | ಅಮಿತ ಶಿಕ್ಷಣ ಮಹಾವಿದ್ಯಾಲಯ, ಬೋಗಾದಿ ೨ನೇ ಹಂತ, ಮೈಸೂರು | 100 | |
| 150 | ಜೆ.ಎಸ್.ಎಸ್. ಇನ್‌ಸ್ಟಿಟ್ಯೂಟ್ ಆಫ್ ಎಜುಕೇಷನ್, ಸುತ್ತೂರು, ನಂಜನಗೂಡು ತಾಲ್ಲೂಕು | 100 | |
| 151 | ವಿದ್ಯಾ ವಿಕಾಸ್ ಬಿ.ಎಡ್ ಕಾಲೇಜು, ಮೈಸೂರು-ಬನ್ನೂರು ರೋಡ್, ಲಲಿತಾದ್ರಿಪುರ ಪೋಸ್ಟ್, ಮೈಸೂರು | 100 | |
| 152 | ಮೌಲಾನ ಅಜಾದ್ ಬಿ.ಎಡ್ ಕಾಲೇಜು, ರಾಧಾ ಕೃಷ್ಣ ನಗರ, ಟೀಚರ್ಸ್ ಲೇಔಟ್, ಮೈಸೂರು | 100 | |
| | **ರಾಯಚೂರು ಜಿಲ್ಲೆ** | | |
| 153 | ಹೆಚ್.ಸಿ.ಎಂ.ಎಸ್.ಕೆ. ಕಾಲೇಜ್ ಆಫ್ ಎಜುಕೇಷನ್, ಬಸವೇಶ್ವರ ರೋಡ್, ರಾಯಚೂರು | 100 | |
| 154 | ಶ್ರೀ ಕನ್ನಿಕಾ ಪರಮೇಶ್ವರಿ ಹಾಸ್ಟೆಲ್ ಕಮಿಟಿ ಬಿ.ಎಡ್ ಕಾಲೇಜು, ತಿಮ್ಮಾಪುರ್ ಪೇಟೆ, ರಾಯಚೂರು | 100 | |
| 155 | ನಂದಿನಿ ಬಿ.ಎಡ್ ಕಾಲೇಜು, ರಾಂಪುರ್ ವಿಲೇಜ್, ರಾಯಚೂರು | 100 | |
| 156 | ನವೋದಯಾ ಕಾಲೇಜ್ ಆಫ್ ಎಜುಕೇಷನ್, ಮಂತ್ರಾಲಯಂ ರೋಡ್, ರಾಯಚೂರು | 100 | |
| | **ಶಿವಮೊಗ್ಗ ಜಿಲ್ಲೆ** | | |
| 157 | ರಾಜೀವ್ ಗಾಂಧಿ ಕಾಲೇಜ್ ಆಫ್ ಎಜುಕೇಷನ್, ಭದ್ರಾವತಿ, ಶಿವಮೊಗ್ಗ ಜಿಲ್ಲೆ | 100 | |
| | **ತುಮಕೂರು ಜಿಲ್ಲೆ** | | |
| 158 | ಕಲ್ಪತರು ಕಾಲೇಜ್ ಆಫ್ ಎಜುಕೇಷನ್, ಬಿ.ಹೆಚ್. ರೋಡ್, ತಿಪಟೂರು | 100 | |
| 159 | ರಾಜೀವ್ ಗಾಂಧಿ ಕಾಲೇಜ್ ಆಫ್ ಎಜುಕೇಷನ್, ಹೆಚ್.ಎಂ.ಎಸ್. ಎಜುಕೇಷನ್ ಸೊಸೈಟಿ, ಶೆಟ್ಟಿ ಹಳ್ಳಿ ರೋಡ್, ತುಮಕೂರು | 100 | |
| 160 | ಚನ್ನಬಸವೇಶ್ವರ ಕಾಲೇಜ್ ಆಫ್ ಎಜುಕೇಷನ್, ಬಿ.ಹೆಚ್. ರೋಡ್, ಗುಬ್ಬಿ | 100 | |
| 161 | ವಿದ್ಯಾ ವಾಹಿನಿ ಕಾಲೇಜ್ ಆಫ್ ಎಜುಕೇಷನ್, ಕುವೆಂಪು ನಗರ, ತುಮಕೂರು | 100 | |

| ಕ್ರ. ಸಂ. | ಕಾಲೇಜುಗಳ ಹೆಸರು | ಎನ್‌ಸಿಟಿಇ ನಿಗದಿಪಡಿಸಿರುವ ಗರಿಷ್ಠ ವಿದ್ಯಾರ್ಥಿ ಪ್ರಮಾಣ | ಷರಾ |
|---|---|---|---|
| 162 | ಶ್ರೀ ಕೃಷ್ಣ ಕಾಲೇಜ್ ಆಫ್ ಎಜುಕೇಷನ್, ಮಹಾಲಕ್ಷ್ಮಿನಗರ, ಬಟವಾಡೆ, ತುಮಕೂರು ಜಿಲ್ಲೆ | 100 | |
| 163 | ದಿಗ್ವಿಜಯ ರೂರಲ್ ಕಾಲೇಜ್ ಆಫ್ ಎಜುಕೇಷನ್, ಹಡವನಹಳ್ಳಿ ಗೇಟ್, ತುರುವೇಕೆರೆ ತಾಲ್ಲೂಕು, ತುಮಕೂರು ಜಿಲ್ಲೆ | 100 | |
| 164 | ಶ್ರೀದೇವಿ ಕಾಲೇಜ್ ಆಫ್ ಎಜುಕೇಷನ್, ಸೋಮೇಶ್ವರ ಎಕ್ಸ್‌ಟೆನ್ಷನ್, ತುಮಕೂರು | 100 | |
| | **ಉಡುಪಿ ಜಿಲ್ಲೆ** | | |
| 165 | ಉಡುಪಿ ಕಾಲೇಜ್ ಆಫ್ ಎಜುಕೇಷನ್, ಆದಿ ಉಡುಪಿ, ಉಡುಪಿ | 100 | |
| | **ಉತ್ತರ ಕನ್ನಡ ಜಿಲ್ಲೆ** | | |
| 166 | ಸೌಖ್ಯ ಕಾಲೇಜ್ ಆಫ್ ಎಜುಕೇಷನ್, ಭಟ್ಕಳ್, ಉತ್ತರ ಕನ್ನಡ ಜಿಲ್ಲೆ | 100 | |
| | **ಬಾಗಲ ಕೋಟೆ ಜಿಲ್ಲೆ** | | |
| 167 | ಬಿ.ವಿ.ವಿ. ಸಂಘದ ಕಾಲೇಜ್ ಆಫ್ ಎಜುಕೇಷನ್, ಬಾಗಲಕೋಟೆ | 100 | |
| 168 | ಎಸ್.ಡಿ.ಎಂ. ಟ್ರಸ್ಟ್ ಬಿ.ಎಡ್ ಕಾಲೇಜು, ತೆರದಾಳ | 100 | |

**ಸುಂದರ ರಾಜ ಗುಪ್ತ**

ಪಿ.ಆರ್. 71 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

**ವಿಷಯ:** ಶ್ರೀ ಬಾಬಣ್ಣ, ಹೂವಿನಬಾವಿ ಶಿಕ್ಷಣ ಶಾಸ್ತ್ರ ಉಪನ್ಯಾಸಕರು, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ಹಿಂದಿನ ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ ಕಾಲೇಜು, ಹೆಬ್ಬಾಳ, ಗುಲ್ಬರ್ಗಾ ಜಿಲ್ಲೆ, ಇವರು ಎಸಗಿದರೆನ್ನಲಾದ ಆರೋಪಗಳ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳ ನೇಮಕಾತಿ ಮಾಡುವ ಬಗ್ಗೆ.

**ಓದಲಾಗಿದೆ:**
1. ದಿ:3.11.2004ರ ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ:ಇಡಿ 33 ಡಿಜಿಪಿ 2004.
2. ಆಪಾದಿತ ಸರ್ಕಾರಿ ನೌಕರ ಶ್ರೀ ಬಾಬಣ್ಣ ಹೂವಿನಬಾವಿ ಅವರ ದಿ:19.11.2004ರ ಪ್ರತಿರಕ್ಷಣಾ ಹೇಳಿಕೆ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 3.11.2004ರ ಕಾರಣ ಕೇಳುವ ನೋಟೀಸಿನಲ್ಲಿ ಶ್ರೀ ಬಾಬಣ್ಣ ಹೂವಿನಬಾವಿ ಅವರು ಎಸಗಿದರೆನ್ನಲಾದ ನಿಯಮ ಬಾಹಿರ ಕೃತ್ಯಗಳನ್ನು ದೋಷಾರೋಪಣೆ ಪಟ್ಟಿ:ದೋಷಾರೋಪಣೆ ವಿವರ ಹಾಗೂ ಸಂಬಂಧಿತ ಮಾಹಿತಿ ಒದಗಿಸಿ ಅವರ ಪ್ರತಿರಕ್ಷಣಾ ಹೇಳಿಕೆ ಇದ್ದಲ್ಲಿ 15 ದಿನಗಳೊಳಗೆ ಸಲ್ಲಿಸಲು ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಗಳ ನಿಯಮ 11ರಡಿ ನೋಟೀಸು ನೀಡಲಾಗಿತ್ತು.

2. ಈ ಸೂಚನೆಗೆ ಸಂಬಂಧಿಸಿದಂತೆ ಆಪಾದಿತ ಸರ್ಕಾರಿ ನೌಕರರು ಮೇಲೆ ಓದಲಾದ ಕ್ರಮ ಸಂಖ್ಯೆ (2) ದಿನಾಂಕ:19.11.2004ರ ಪ್ರತಿರಕ್ಷಣಾ ಹೇಳಿಕೆಯಲ್ಲಿ ಆಪಾದನೆಗಳನ್ನು ನಿರಾಕರಿಸಿದ್ದಾರೆ.

3. ಸರ್ಕಾರವು ಈ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳಲು ಕೂಲಂಕುಷ ವಿಚಾರಣೆ ಮಾಡುವುದು ಸೂಕ್ತವೆಂದು ಮನಗಂಡು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಕ ಮಾಡಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 33 ಡಿಜಿಪಿ 2004, ಬೆಂಗಳೂರು, ದಿನಾಂಕ: 3ನೇ ಜನವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಬಾಬಣ್ಣ, ಹೂವಿನಬಾವಿ ಶಿಕ್ಷಣ ಶಾಸ್ತ್ರ ಉಪನ್ಯಾಸಕರು, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ಹಿಂದಿನ ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ ಕಾಲೇಜು, ಹೆಬ್ಬಾಳ, ಗುಲ್ಬರ್ಗಾ ಜಿಲ್ಲೆ, ಇವರ ಮೇಲಿನ ಆರೋಪಗಳಿಗೆ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11(2) ಅಡಿಯಲ್ಲಿ ಪ್ರದತ್ತವಾದ ಅಧಿಕಾರಿಗಳನ್ನು ಚಲಾಯಿಸಿ ಉಪನಿರ್ದೇಶಕರು, ಪದವಿಪೂರ್ವ ಮತ್ತು ವೃತ್ತಿ ಶಿಕ್ಷಣ ಇಲಾಖೆ, ಗುಲ್ಬರ್ಗಾ, ಅವರನ್ನು ಈ ಪ್ರಕರಣದ ವಿಚಾರಣಾಧಿಕಾರಿಯಾಗಿಯೂ ಹಾಗೂ ನಿಯಮ 11(5)(ಸಿ) ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಾಂಶುಪಾಲರು, ಸರ್ಕಾರಿ ಸ್ವತಂತ್ರ ಪದವಿಪೂರ್ವ ಕಾಲೇಜು, (ಬಾಲಕರ) ಗುಲ್ಬರ್ಗಾ, ಅವರನ್ನು ಮಂಡನಾಧಿಕಾರಿಯಾಗಿಯೂ ನೇಮಿಸಿ ಆದೇಶಿಸಿದೆ.

ವಿಚಾರಣಾಧಿಕಾರಿಗಳು ಪ್ರತಿ ಆರೋಪದ ಬಗ್ಗೆ ನಿಯಮಾನುಸಾರ ವಿಚಾರಣೆ ನಡೆಸಿ ಸ್ಪಷ್ಟ ನಿರ್ಣಯಗಳನ್ನೊಳಗೊಂಡ ವಿಚಾರಣಾ ವರದಿಯನ್ನು ಈ ಆದೇಶ ತಲುಪಿದ ಎರಡು ತಿಂಗಳೊಳಗಾಗಿ ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 72 **ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇ-1,2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಸ್. ರಾಜಾರಾಂ, ಕೆ.ಎ.ಎಸ್. (ಹಿರಿಯ ಶ್ರೇಣಿ) ಶ್ರೀ ಬಿ.ಆರ್. ಕೃಷ್ಣನ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಹಾಗೂ ಶ್ರೀ ಲಕ್ಷ್ಮಿನರಸಯ್ಯ, ತಾಲ್ಲೂಕು ಪಂಚಾಯತ್, ಕಾರ್ಯನಿರ್ವಾಹಕ ಅಧಿಕಾರಿ ಬಾಗೇಪಲ್ಲಿ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ದಂಡನೆ ವಿಧಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಕ್ರಮಾಂಕ:ಸಿಆಸುಇ 70 ಎಸ್‌ಇಎನ್ 95 ದಿನಾಂಕ: 1.8.2003.
2. ಶ್ರೀ ಎಸ್. ರಾಜಾರಾಂ, ಶ್ರೀ ಬಿ.ಆರ್. ಕೃಷ್ಣನ್ ಮತ್ತು ಶ್ರೀ ಲಕ್ಷ್ಮಿನರಸಯ್ಯ ಅವರುಗಳ ಉತ್ತರ ಕ್ರಮವಾಗಿ ದಿನಾಂಕ:29.8.2003, 25.8.2003 ಮತ್ತು 18.8.2003.

3. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 70 ಎಸ್ಇಎನ್ 95 ದಿನಾಂಕ: 17.10.2003.
4. ಮುಖ್ಯಕಾರ್ಯನಿರ್ವಾಹಕ ಅಧಿಕಾರಿ ಜಿಲ್ಲಾ ಪಂಚಾಯತ್ ಕೋಲಾರ ರವರ ದಿನಾಂಕ: 12.2.2004ರ ವಿಚಾರಣಾ ವರದಿ.
5. ಶ್ರೀ ಲಕ್ಷ್ಮಿನರಸಯ್ಯ ನವರಿಗೆ 2ನೇ ಕಾರಣ ಕೇಳಿ ನೋಟೀಸ್ ಸಿಆಸುಇ 70 ಎಸ್ಇಎನ್ 95 ದಿನಾಂಕ:28.7.2004.
6. ಶ್ರೀ ಲಕ್ಷ್ಮಿನರಸಯ್ಯ ನವರ ದಿನಾಂಕ:30.8.2004ರ ಉತ್ತರ.

**ಪ್ರಸ್ತಾವನೆ:**

ಶ್ರೀ ಎಸ್. ರಾಜಾರಾಂ ಕೆ.ಎ.ಎಸ್. (ಹಿರಿಯ ಶ್ರೇಣಿ) ರವರು ಚಿಕ್ಕಬಳ್ಳಾಪುರ ಉಪ ವಿಭಾಗಾಧಿಕಾರಿಯಾಗಿ, ಶ್ರೀ ಬಿ.ಆರ್. ಕೃಷ್ಣನ್ ಕೆ.ಎ.ಎಸ್. (ಕಿರಿಯ ಶ್ರೇಣಿ) ರವರು ಗೌರಿಬಿದನೂರು ತಾಲ್ಲೂಕು ತಹಶೀಲ್ದಾರು ಆಗಿ ಶ್ರೀ ಲಕ್ಷ್ಮಿನರಸಯ್ಯ ನವರು ಗೌರಿಬಿದನೂರು ಕ್ಷೇತ್ರಾಭಿವೃದ್ಧಿ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಕೋಲಾರ ಜಿಲ್ಲೆ ಗೌರಿಬಿದನೂರು ತಾಲ್ಲೂಕು ಪಂಚಾಯತ್ ವ್ಯಾಪ್ತಿಯಲ್ಲಿ ಆಶ್ರಯ ಯೋಜನೆಯಡಿ ಫಲಾನುಭವಿಗಳಿಗೆ ಉಚಿತ ನಿವೇಶನ ಹಂಚುವ ಸಲುವಾಗಿ ಗೌರಿಬಿದನೂರು ತಾಲ್ಲೂಕು ಮುಂಚೇನ ಹಳ್ಳಿ ಹೋಬಳಿ, ಅದ್ದೆಕೊಪ್ಪ ಗ್ರಾಮದ ಸರ್ವೆನಂಬರು 76 ರಲ್ಲಿ ಖರೀದಿಸಲಾದ 4 ಎಕರೆ 3 ಗುಂಟೆ ಜಮೀನಿನ ಸಂಬಂಧ ವಾಸ್ತವವಾಗಿ ಜಮೀನು 1 ಎಕರೆ 3 ಗುಂಟೆ ಮಾತ್ರ ಇದ್ದಾಗ್ಯೂ ಸ್ಥಳ ತಪಾಸಣೆ ಮಾಡದೆ ದಾಖಲಾತಿ ಆಧಾರದ ಮೇಲೆ 4 ಎಕರೆ 3 ಗುಂಟೆ ಜಮೀನಿಗೆ ಹಣಪಾವತಿಸುವ ಮೂಲಕ ಸರ್ಕಾರಕ್ಕೆ ನಷ್ಟ ಉಂಟುಮಾಡಿದ ಆರೋಪಕ್ಕಾಗಿ ಶ್ರೀ ಎಸ್. ರಾಜಾರಾಂ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಶ್ರೀ ಬಿ.ಆರ್. ಕೃಷ್ಣನ್ ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಮತ್ತು ಶ್ರೀ ಲಕ್ಷ್ಮಿನರಸಯ್ಯ ತಾಲ್ಲೂಕು ಪಂಚಾಯತ್ ಕಾರ್ಯನಿರ್ವಾಹಕ ಅಧಿಕಾರಿ ಅವರುಗಳಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ: 1.8.2003ರ ನೋಟೀಸ್ ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸ್‌ಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 29.8.2003, 25.8.2003 ಮತ್ತು 18.8.2003 ರ ಉತ್ತರ ಸಲ್ಲಿಸಿದ ಆರೋಪಿಗಳು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ.

ಆರೋಪಿತ ಅಧಿಕಾರಿಗಳ ಉತ್ತರಗಳನ್ನು ಪರಿಶೀಲಿಸಿದ ಸರ್ಕಾರವು ಅವುಗಳು ಮನಗಾಣಿಸುವ ರೀತಿಯಲ್ಲಿಲ್ಲದ ಕಾರಣ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ಮೇಲೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಕೋಲಾರ ಜಿಲ್ಲಾ ಪಂಚಾಯತ್ ರವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (4) ರಲ್ಲಿ ಓದಲಾದ ದಿನಾಂಕ:12.2.2004ರ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದಾರೆ. ವಿಚಾರಣಾ ವರದಿಯಲ್ಲಿ ಆರೋಪಿತರಾದ ಶ್ರೀ ಬಿ.ಆರ್. ಕೃಷ್ಣನ್ ಮತ್ತು ರಾಜಾರಾಂ ರವರ ವಿರುದ್ಧ ಹೊರಿಸಲಾದ ಆರೋಪಗಳು ಸಾಬೀತಾಗಿಲ್ಲವೆಂದು ವರದಿ ಮಾಡಿದ್ದಾರೆ.

ಆದರೆ ಶ್ರೀ ಲಕ್ಷ್ಮೀನರಸಯ್ಯ ರವರ ವಿರುದ್ಧ ಹೊರಿಸಲಾದ ಆರೋಪಗಳಲ್ಲಿ ಜಮೀನಿನ ಸ್ವಾಧೀನಪಡೆದ ನಂತರ ನಿವೇಶನಗಳನ್ನು ವಿಂಗಡಿಸಲು ಯಾವುದೇ ಕ್ರಮ ಜರುಗಿಸಿಲ್ಲವೆಂಬುದು ಮತ್ತು ಸ್ಥಳ ತನಿಖೆ ಮಾಡಿಲ್ಲವೆಂಬ ಆರೋಪ ಸಾಬೀತಾಗಿರುವುದಿಲ್ಲವೆಂದು ವರದಿ ಮಾಡಿದ್ದಾರೆ. 4.03 ಎಕರೆಗೆ ರೂ. 58,725 ಗಳನ್ನು ಪಾವತಿಸಿರುವುದು ಸಹ ಸರ್ಕಾರದ ಮಾರ್ಗಸೂಚಿಯಂತೆ ಇರುತ್ತದೆ. ಆದರೆ ಭೂಮಾಲೀಕರಿಗೆ 3 ಎಕರೆ ಹೆಚ್ಚು ಮೌಲ್ಯ ಪಾವತಿಯಾಗಿರುವುದು ಮಾತ್ರ ಸಾಬೀತಾಗಿರುತ್ತದೆಂದು ವರದಿ ನೀಡಿದ್ದಾರೆ. ಈ ಹಿನ್ನೆಲೆಯಲ್ಲಿ ಶ್ರೀ ಲಕ್ಷ್ಮಿನರಸಯ್ಯ ರವರಿಗೆ ವಿಚಾರಣಾ ವರದಿಯ ಪ್ರತಿಯನ್ನು ಒದಗಿಸಿ ಉಲ್ಲೇಖ (5) ರಲ್ಲಿನ ನೋಟೀಸಿನಲ್ಲಿ ಇವರ ಹೇಳಿಕೆಯನ್ನು ಸಲ್ಲಿಸಲು ಅವಕಾಶವನ್ನು ನೀಡಲಾಗಿತ್ತು. ಈ ನೋಟೀಸಿಗೆ ಉಲ್ಲೇಖ(6)ರ ಪತ್ರದಲ್ಲಿ ಸದರಿಯವರು ಉತ್ತರ ನೀಡಿದ್ದಾರೆ. ಈ ವಿವರಣೆಯಲ್ಲಿ ಇವರ ವಿರುದ್ಧದ ಆರೋಪದ ಬಗ್ಗೆ ಸಮರ್ಥನೀಯ ಪ್ರತಿಪಾದನೆ ನೀಡದೇ ಕೇವಲ ಇವರು ಆಗ ಪ್ರೊಬೇಷನರಿ ಅವಧಿಯಲ್ಲಿದ್ದು ಇಂತಹ ಪ್ರಕರಣವನ್ನು ಮೊದಲಬಾರಿಗೆ ವ್ಯವಹರಿಸಿರುತ್ತಾರೆಂದು ಅವರು ಯಾವುದೇ ದುರ್ನಡತೆ ಎಸಗಿಲ್ಲವೆಂದು ಪ್ರಾಮಾಣಿಕತೆಯಿಂದ ಹೊಸ ಅಧಿಕಾರದ ಹುರುಪಿನಲ್ಲಿ ಕೆಲಸ ಮಾಡಿರುತ್ತಾರೆಂದು ನಿವೇಶನವನ್ನು ರಚಿಸಲು ಸ್ಥಳೀಯ ಸಮಸ್ಯೆಗಳು ಎಷ್ಟೇ ಇದ್ದರೂ ಸಕಲ ಪ್ರಯತ್ನಗಳನ್ನು ಮಾಡಿದ್ದಾರೆಂದು ಪ್ರಸ್ತಾಪಿಸಿದ ಜಮೀನು 4 ಎಕರೆ 3 ಗುಂಟೆ ಇರುವುದಾಗಿ ಎಲ್ಲ ರೆವಿನ್ಯೂ ದಾಖಲೆಗಳಲ್ಲಿ ಮೂಡಿಬಂದಿದ್ದರಿಂದ ಅವನ್ನೇ ತಾವು ಆಧಾರಪಟ್ಟಿದ್ದರಿಂದ ಈ ರೀತಿಯ ಸಮಸ್ಯೆ ಉದ್ಭವಿಸಿತ್ತೆಂದು ಅವರ ವಿರುದ್ಧ ವಿಚಾರಣೆಯನ್ನು ಕೈಬಿಡಬೇಕೆಂದು ಮನವಿ ಮಾಡಿರುತ್ತಾರೆ.

ಅಪಾದಿತರ ವಿವರಣೆಯನ್ನು ವಿಚಾರಣಾ ವರದಿಯೊಂದಿಗೆ ಮತ್ತು ಸಾಕ್ಷ್ಯಾಧಾರಗಳ ಹಿನ್ನೆಲೆಯಲ್ಲಿ ಪರಿಶೀಲಿಸಲಾಗಿ ಆರೋಪಿತರು ಮತ್ತು ಸಂಬಂಧಪಟ್ಟ ಕಿರಿಯ ಅಭಿಯಂತರರು ಜಮೀನನ್ನು ಖರೀದಿಸಿದ ನಂತರ ಸ್ವಾಧೀನಕ್ಕೆ ಪಡೆಯಲು ಸಕಾಲದಲ್ಲಿ ಕ್ರಮ ತೆಗೆದುಕೊಳ್ಳಲು ವಿಫಲರಾಗಿರುವುದು ಕಂಡು ಬರುತ್ತದೆ. ಇವರು ಜಮೀನಿನ ಸ್ವಾಧೀನ ಬಗ್ಗೆ ಇರುವ ಸಮಸ್ಯೆಗಳ ಬಗ್ಗೆ ಮೇಲಾಧಿಕಾರಿಗಳಿಗೆ ಸಹ ತಿಳಿಸಲು ವಿಫಲರಾಗಿರುತ್ತಾರೆ. ಆಪಾದಿತರು ದಿನಾಂಕ: 7.4.95 ರಂದು ಸದರಿ ಜಮೀನಿನ ಸ್ವಾಧೀನತೆಯನ್ನು ಪಡೆಯಲು ಸಾಧ್ಯವಾಗುತ್ತಿಲ್ಲವೆಂದು ವರದಿ ಮಾಡಿರುತ್ತಾರೆ. ಕೊನೆಗೆ ಸರ್ಕಾರಿ ಸುತ್ತೋಲೆ 6.12.93ರ ಪ್ರಕಾರ ನಿವೇಶನಗಳನ್ನು ಹಂಚುವ ಜವಾಬ್ದಾರಿ ತಹಶೀಲ್ದಾರರಿಗೆ ಹಂಚಲಾಗಿದೆ ಎಂದು ನೆಪವೊಡ್ಡಿ ಸುಮಾರು ಒಂದುವರ್ಷಕ್ಕೂ ಮೇಲಾಗಿ ಅನಾವಶ್ಯಕ ವಿಳಂಬ ಮಾಡಿರುತ್ತಾರೆ. ಈ ಕಾರಣಗಳಿಂದ ಅಪಾದಿತರ ಹೇಳಿಕೆಯಲ್ಲಿ ಯಾವುದೇ ಸಮರ್ಥನೀಯ ಕಾರಣಗಳು ಇಲ್ಲದಿರುವುದನ್ನು ಮನಗಂಡು ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಸಿಆಸುಇ 70 ಎಸ್ಇಎನ್ 95, ಬೆಂಗಳೂರು, ದಿನಾಂಕ: 6ನೇ ಜನವರಿ 2005**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii)ರಡಿ ಸರ್ಕಾರವು ಶ್ರೀ ಲಕ್ಷ್ಮಿನರಸಯ್ಯ, ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್ ಗೌರಿಬಿದನೂರು, ರವರ ಮುಂದಿನ 2 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ (with cumulative effect) ತಡೆಹಿಡಿಯುವ ದಂಡನೆಯನ್ನು ವಿಧಿಸಿ ಈ ಮೂಲಕ ಆದೇಶಿಸುತ್ತದೆ.

ಹಾಗೂ ಶ್ರೀ ಎಸ್. ರಾಜಾರಾಂ ಕೆ.ಎ.ಎಸ್. (ಹಿರಿಯ ಶ್ರೇಣಿ) ಮತ್ತು ಶ್ರೀ ಬಿ.ಆರ್. ಕೃಷ್ಣನ್ ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಇವರುಗಳ ವಿರುದ್ಧ ಮಾಡಲಾದ ದೋಷಾರೋಪಣೆಗಳಿಂದ ಅವರನ್ನು ದೋಷಮುಕ್ತರನ್ನಾಗಿಸಿ ಪರಿಗಣಿಸಿ ಆದೇಶಿಸಿದೆ.

ಈ ವಿಚಾರಣೆಯು ನಡೆಯದಿದ್ದಲ್ಲಿ ಶ್ರೀ ಎಸ್. ರಾಜಾರಾಂ ಮತ್ತು ಬಿ.ಆರ್. ಕೃಷ್ಣನ್ ರವರುಗಳು ಯಾವ ಸೌಲಭ್ಯಗಳಿಗೆ ಅರ್ಹರಿದ್ದರೋ ಅಂತಹ ಎಲ್ಲ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 73

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3)